

ಕನ್ನಡ ವಿಶ್ವವಿದ್ಯಾಲಯ
ಹಂಪಿ

2011-12ನೇ ಸಾಲಿನ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸುತ್ತಿರುವ ಸಂಶೋಧನಾ ನಿಬಂಧ

# ಬೆಟ್ಟದಪುರ - ಒಂದು ಸಾಂಸ್ಕೃತಿಕ ಅಧ್ಯಯನ

951-960

ನಿಬಂಧಕಾರರು
ಸ್ವಾಮಿನಾಯಕ ಕೆ.ಎಸ್.
ಕನ್ನಡ ಎಂ.ಫಿಲ್. ವಿದ್ಯಾರ್ಥಿ (ಹಂಪಿ, ಕ.ವಿ.ವಿ)
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು
ಡಾ. ಎಚ್.ಎನ್. ಮಂಜುರಾಜ್
ಸಹಪ್ರಾಧ್ಯಾಪಕರು
ಸರ್ಕಾರಿ ಪ್ರಥಮದರ್ಜೆ ಕಾಲೇಜು
ಕೃಷ್ಣರಾಜನಗರ, ಮೈಸೂರುಜಿಲ್ಲೆ

960

ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

2011-12

960



ಕನ್ನಡ ವಿಶ್ವವಿದ್ಯಾಲಯ
ಹಂಪಿ

2011–12ನೇ ಸಾಲಿನ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸುತ್ತಿರುವ ಸಂಶೋಧನಾ ನಿಬಂಧ

# ಬೆಟ್ಟದಪುರ : ಒಂದು ಸಾಂಸ್ಕೃತಿಕ ಅಧ್ಯಯನ

ನಿಬಂಧಕಾರರು

**ಸ್ವಾಮಿನಾಯಕ ಕೆ.ಎಸ್.**
ಕನ್ನಡ ಎಂ.ಫಿಲ್. ವಿದ್ಯಾರ್ಥಿ (ಹಂಪಿ, ಕ.ವಿ.ವಿ)
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಎಚ್.ಎನ್. ಮಂಜುರಾಜ್**
ಕನ್ನಡ ಸಹ ಪ್ರಾಧ್ಯಾಪಕರು
ಸರ್ಕಾರಿ ಪ್ರಥಮದರ್ಜೆ ಕಾಲೇಜು
ಕೃಷ್ಣರಾಜನಗರ

ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

**2011-12**

# ಅಭ್ಯರ್ಥಿಯ ಘೋಷಣಾ ಪತ್ರ

**2011-12**ನೇ ಸಾಲಿನಲ್ಲಿ ನೊಂದಣಿ ಸಂಖ್ಯೆ **KVTMKS-00526**ರ ಹಂಪಿ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಯ ವಿದ್ಯಾರ್ಥಿಯಾದ ಸ್ವಾಮಿನಾಯಕ ಕೆ.ಎಸ್. ಆದ ನಾನು ಡಾ. ಎಚ್.ಎನ್.ಮಂಜುರಾಜ್, ಕನ್ನಡ ಸಹ ಪ್ರಾಧ್ಯಾಪಕರು, ಸರ್ಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜು, ಕೃಷ್ಣರಾಜನಗರ ಇವರ ಮಾರ್ಗದರ್ಶನದಲ್ಲಿ **"ಬೆಟ್ಟದಪುರ : ಒಂದು ಸಾಂಸ್ಕೃತಿಕ ಅಧ್ಯಯನ"** ಎಂಬ ಶೀರ್ಷಿಕೆಯ ನಿಬಂಧವನ್ನು ಎಂ.ಫಿಲ್. ಪದವಿಗಾಗಿ ರಚಿಸಿ ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದೇನೆ.

ಈ ಸಂಶೋಧನಾ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕಾಗಲಿ ಅಥವಾ ಬೇರೆ ವಿಶ್ವವಿದ್ಯಾನಿಲಯಕ್ಕಾಗಲಿ ಪದವಿ, ಡಿಪ್ಲೊಮೋ ಅಥವಾ ಇನ್ನಿತರ ಪರೀಕ್ಷೆಗಾಗಲಿ ಒಪ್ಪಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Swaminayaka KS

**ಮೈಸೂರು**
**30-05-2012**

**(ಸ್ವಾಮಿನಾಯಕ ಕೆ.ಎಸ್)**
ನಿಬಂಧಕಾರರು
ಕನ್ನಡ ಎಂ.ಫಿಲ್ ವಿದ್ಯಾರ್ಥಿ
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

# ದೃಢೀಕರಣ ಪತ್ರ

**2011-12ನೇ** ಸಾಲಿನಲ್ಲಿ ಕ್ರಮಸಂಖ್ಯೆ **KVTMKS/00526ರ** ಹಂಪಿ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಯ ವಿದ್ಯಾರ್ಥಿಯಾದ **ಸ್ವಾಮಿನಾಯಕ .ಕೆ.ಎಸ್.** ಅವರು ನನ್ನ ಮಾರ್ಗದರ್ಶನದಲ್ಲಿ **"ಬೆಟ್ಟದಪುರ – ಒಂದು ಸಾಂಸ್ಕೃತಿಕ ಅಧ್ಯಯನ"** ಎಂಬ ಶೀರ್ಷಿಕೆಯ ನಿಬಂಧವನ್ನು ಎಂ.ಫಿಲ್. ಪದವಿಗಾಗಿ ರಚಿಸಿ ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದಾರೆ.

ಈ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮೊ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿಲ್ಲವೆಂದು ದೃಢೀಕರಿಸುತ್ತೇನೆ.

**ಮೈಸೂರು**
**30-05-2012**

(ಡಾ. ಎಚ್.ಎನ್. ಮಂಜುರಾಜ್)
ಮಾರ್ಗದರ್ಶಕರು
ಸಹ ಪ್ರಾಧ್ಯಾಪಕರು
ಸರ್ಕಾರಿ ಪ್ರಥಮದರ್ಜೆ ಕಾಲೇಜು
ಕೃಷ್ಣರಾಜನಗರ

Dr. H.N. MANJURAJ
M.A., Ph.D., PGDF
Associate Professor of Kannada
Govt. First Grade College For Women
K.R.NAGAR, Mysore Dist.

# ಬೆಟ್ಟದಪುರ : ಒಂದು ಸಾಂಸ್ಕೃತಿಕ ಅಧ್ಯಯನ

## ಪರಿವಿಡಿ



*****

# ಅಧ್ಯಾಯ – 1

## ಅಧ್ಯಯನದ ಉದ್ದೇಶ, ಸ್ವರೂಪ, ಮತ್ತು ವ್ಯಾಪ್ತಿ

ಭರತನ ನಾಡಾದ ಭಾರತದಲ್ಲಿಯು ಅಸಂಖ್ಯಾ ವಿಧದ ಸಂಸ್ಕೃತಿ, ಆಚಾರ-ವಿಚಾರಗಳು, ಭಾಷೆ, ಜನಾಂಗ ಮುಂತಾದವುಗಳಿದ್ದು ವೈವಿಧ್ಯತೆಯಲ್ಲಿ ಏಕತೆಯನ್ನು ಸಾಧಿಸಿದಂತಿದೆ. ಇದು ಇಲ್ಲಿನ ಹಿರಿಮೆಯ ಶಿಖರವಾಗಿದೆ. ಅಂತೆಯೇ ಕರುನಾಡು ಎಂದೇ ಬಿಂಬಿತವಾಗಿರುವ ಕರ್ನಾಟಕವು ಸಾಂಸ್ಕೃತಿಕ ಕೊಡುಗೆಯಲ್ಲಿ ಎತ್ತಿದ ಕೈ ಎನ್ನಬಹುದು. ಇಲ್ಲಿನ ಭೌಗೋಳಿಕ ಸಂಪತ್ತು, ಪ್ರಶಾಂತ ವಾತಾವರಣವು ಸಾಂಸ್ಕೃತಿಕ ಬೆಳೆವಣಿಗೆಗೆ ಅಮೂಲ್ಯವಾದ ಕೊಡುಗೆ ನೀಡಿದೆ ಎಂದೆನಬಹುದು. ಇಂತಹ ತನ್ನದೇಯಾದ ಹಿನ್ನೆಲೆಯಲ್ಲಿ ಹೊಂದಿರುವ ಕರ್ನಾಟಕವು ಭಾರತದಲ್ಲಿ ತನ್ನದೆಯಾದ ಪ್ರಾಮುಖ್ಯತೆಯನ್ನು ಗಳಿಸಿದೆ.

ಕರ್ನಾಟಕದಲ್ಲಿಯೂ ಕೂಡಾ ತನ್ನದೇಯಾದ ವಿಶಿಷ್ಟವಾದ ಸಾಂಸ್ಕೃತಿಕ ಸ್ಥಾನಮಾನದಲ್ಲಿ ಅನಾದಿ ಕಾಲದಿಂದಲೂ ಅದ್ವಿತಿಯ ಸ್ಥಾನದಲ್ಲಿ ನಿಂತಿದೆ. ಇಲ್ಲಿ ಎಲ್ಲಾ ಮತ-ಧರ್ಮದ ಜನರು ತಮ್ಮದೇಯಾದ ಧಾರ್ಮಿಕ, ಸಾಂಸ್ಕೃತಿಕ ಆಚರಣೆಯ ಜೊತೆಗೆ ಇತರ ಧರ್ಮವನ್ನು ಗೌರವಿಸುತ್ತಾ ಅನ್ಯೋನ್ಯವಾಗಿ ಸಹಬಾಳ್ವೆಯನ್ನು ನಡೆಸುತ್ತಿದ್ದಾರೆ.

ಅನಾದಿ ಕಾಲದಿಂದಲೂ ವಿವಿಧ ಪ್ರದೇಶಗಳಲ್ಲಿ ವಿವಿಧ ಸಂಸ್ಕೃತಿಯನ್ನು ಹೊಂದಿದ್ದರು, ಸಂಸ್ಕಾರ, ಸಂಪ್ರದಾಯ, ಆಚರಣೆಗಳಲ್ಲಿ ವಿಭಿನ್ನತೆಗಳನ್ನು ಹೊಂದಿದೆ. ಹೀಗಾಗಿ ಪ್ರತಿ ಪ್ರದೇಶವು ತನ್ನದೇ ಆದ ಪಾವಿತ್ರ್ಯ ಹಾಗೂ ಶ್ರೇಷ್ಟತೆಯನ್ನು ಹೊಂದಿದೆ.

ಕರ್ನಾಟಕ ಸಂಸ್ಕೃತಿಯು ವೈಭವಪೇತವಾದುದು, ಇಲ್ಲಿನ ಆಚರಣೆಗಳು, ನಡೆಸಿಕೊಂಡು ಬಂದ ಸಂಪ್ರದಾಯಗಳು, ಕಲೆ-ಸಾಹಿತ್ಯಗಳು, ವಿವಿಧ ಕಾಲಘಟಗಳಲ್ಲಿ ಸದಾ ಅರಳುವ ಸೂರ್ಯನ ಪ್ರಖರದ ಹೊಂಗಿರಂಣದಂತೇ ಒಳಿತು-ಕೆಡಕುಗಳ ನಡುವೆ ಹಾಯ್ದು ಏಳು-ಬೀಳುಗಳನ್ನು ಅನುಭವಿಸುತ್ತಾ, ತನ್ನ ಸ್ವಂತಿಕೆಯನ್ನು ಉಳಿಸಿಕೊಂಡು ಬಂದು ತನ್ನದೇಯಾದ ಸಂಪ್ರದಾಯಗಳನ್ನು ಪರಂಪರೆ ಮತ್ತು ಸಾಂಸ್ಕೃತಿಕ ಹಿರಿಮೆ-ಗರಿಮೆಯನ್ನು ತನ್ನೊಡಲುವಿನಲ್ಲಿ ಹುದುಗಿಸಿಕೊಂಡು ಪಸರಿಸುತ್ತಾ ಸಾಗುತ್ತಾ ಬರುತ್ತಿದೆ.

ಒಂದು ಪ್ರದೇಶದ ನೈಜವಾದ ಸಾಂಸ್ಕೃತಿಕ ವಿಚಾರಗಳನ್ನು ತಿಳಿಯುವ ಮೊದಲೂ ಆ ಪ್ರದೇಶದಲ್ಲಿನ ಜನರ ಧರ್ಮ ರೀತಿ–ನೀತಿಗಳು, ಜನರ ಆಚಾರ–ವಿಚಾರಗಳೊಡಗೂಡಿದ ಜೀವನ ಶೈಲಿ ಹಾಗೂ ಕಲೆ ಸಾಹಿತ್ಯ ಇದಕ್ಕೆ ಪೂರಕವಾದ ಆಧಾರಗಳು ಮೊದಲಾದವುಗಳನ್ನು ತಿಳಿಯುವುದು ಆವಶ್ಯಕ,ಇದನ್ನು ಸಾಂಸ್ಕೃತಿಕ ಅಧ್ಯಯನ ಎಂದು ಕರೆಯಬಹುದಾಗಿದೆ. ಈ ರೀತಿಯಲ್ಲಿ ಅರಿಯುವುದು 'ಬೆಟ್ಟದಪುರ: ಒಂದು ಸಾಂಸ್ಕೃತಿಕ ಅಧ್ಯಯನ' ಸಂಪ್ರಬಂಧದ ಆಶಯವಾಗಿದೆ.

ಭಾರತೀಯ ಸಂಸ್ಕೃತಿಯು ಪ್ರಾಚೀನ ಕಾಲದಿಂದಲೂ ವಿಶ್ವದಲ್ಲೇ ಶ್ರೇಷ್ಠವಾದ ಸಂಸ್ಕೃತಿಗಳಲ್ಲಿ ಒಂದಾಗಿದೆ. ಜವಾಹರಲಾಲ್ ನೆಹರು ಹೇಳಿದಂತೆ ವೈವಿಧ್ಯತೆಯಲ್ಲಿ ಏಕತೆಯನ್ನು ಹೊಂದಿರುವ ಹಾಗೂ ಅದರಲ್ಲೇ ಎಲ್ಲರಿಗೂ ಕಸ್ತೂರಿಯ ಸುಗಂಧ ಪರಿಮಳ ಸೂಸುತ್ತಿರುವ, ಕರ್ನಾಟಕವನ್ನು ಆಳಿದ ಕದಂಬರು, ಗಂಗರು, ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸರು, ವಿಜಯನಗರ ಅರಸರು, ಕೆಳದಿಯ ನಾಯಕರು, ಚಿತ್ರದುರ್ಗದ ಮದಕರಿನಾಯಕರು, ಮೈಸೂರು ಅರಸರು, ಇನ್ನೂ ಹತ್ತು ಹಲವು ರಾಜಮನೆತನಗಳ ತವರು ಮನೆಯಾಗಿದ್ದು, ಹಲವು ಕಲೆಗಳ ಗಣಿಯಾಗಿದೆ. ಅನಾದಿ ಕಾಲದಿಂದಲೂ ಹಲವು ಕವಿಗಳಿಗೆ ಸಂಶೋಧಕರಿಗೆ, ಆಸಕ್ತರಿಗೆ ಮಾತೃನೆಲೆಯಾಗಿದ್ದು ಸಮೃದ್ಧವಾದ ತವರು ಮನೆಯಾಗಿದೆ.

ಕರ್ನಾಟಕದಲ್ಲಿ ವಿಭಿನ್ನವಾದ ನದಿಗಳ ಅಚ್ಚುಕಟ್ಟನ್ನು ಹೊಂದಿದೆ. ದಕ್ಷಿಣ ಗಂಗೆ ಎನಿಸಿದ ಕಾವೇರಿ ಇಲ್ಲಿನ ಜೀವಾಳವಾಗಿದ್ದರೆ ಕೃಷ್ಣಾ, ಹೇಮಾವತಿ, ಲಕ್ಷ್ಮಣ ತೀರ್ಥ, ತುಂಗಭದ್ರ, ಮಲಪ್ರಭ, ಘಟಪ್ರಭಾ, ಭೀಮಾ ಮುಂತಾದ ಹಲವಾರು ನದಿಗಳು ನಾಗರಿಕತೆಯ ಬೆಳೆವಣಿಗೆಗೆ ಸಹಾಯ ಮಾಡಿವೆ. ಜನರು ಸುಭೀಕ್ಷವಾಗಿ ಬಾಳಲೂ ಅವಶ್ಯವಾದ ನೀರು, ಆಹಾರವನ್ನು ಒದಗಿಸಿ, ಋಷಿಮುನಿಗಳು ನೆಲೆಸಲೂ ಪ್ರಶಸ್ತ್ಯವಾದ ವಾತಾವರಣ ಉಂಟಾಗಲು ಪೂರಕವಾದ ಸನ್ನಿವೇಶವನ್ನು ಸೃಷ್ಟಿಸಿವೆ. ಇಲ್ಲಿನ ವಿವಿಧ ರಾಜಮನೆತನದ ರಾಜರುಗಳು, ಗುಡಿಗೋಪುರ, ದೇವಾಲಯಗಳನ್ನು ನಿರ್ಮಿಸಿದ್ದಾರೆ. ಇಂತಹವುಗಳಲ್ಲಿ ಅಲ್ಲಿನ ಸ್ಥಳೀಯರ ಎಲ್ಲ ಬಗ್ಗೆಯ ಆಚಾರ–ವಿಚಾರ, ರೂಢಿ–ಸಂಪ್ರದಾಯ, ಧರ್ಮ ಮುಂತಾದವುಗಳನ್ನು ಅಂದಿನ ಸ್ಥಿತಿಗತಿಗಳನ್ನು ಸೆರೆ ಒಡಿಯುವಲ್ಲಿ ಶ್ರಮಿಸಿದ್ದಾರೆ. ಇಂತಹವುಗಳಲ್ಲಿ ಬೆಟ್ಟದಪುರದ ಅಧ್ಯಯನವು ಸಂಶೋಧಕರಿಗೆ ಕೈಗನ್ನಡಿಯಾಗಿದೆ.

ಕರ್ನಾಟಕದ ಸಾಂಸ್ಕೃತಿಕ ರಾಜಧಾನಿ ಎನಿಸಿದ ಮೈಸೂರು ಜಿಲ್ಲೆಯು, ಕರ್ನಾಟಕದ ದಕ್ಷಿಣ ಭಾಗದಲ್ಲಿ ಹಾಸನ, ಕೊಡಗು, ಚಾಮರಾಜನಗರ, ಮಂಡ್ಯ ಜಿಲ್ಲೆಗಳ ನಡುವೆಯಿದೆ. ಮೈಸೂರು ಜಿಲ್ಲೆಯ ಪಿರಿಯಾಪಟ್ಟಣವು ಒಂದು ತಾಲ್ಲೂಕು ಕೇಂದ್ರವಾಗಿದೆ, ಈ ತಾಲೂಕಿನಲ್ಲಿ ಹಲವಾರು ಚಾರಿತ್ರಿಕ ಹಾಗೂ ಪೌರಾಣಿಕ ಹಿನ್ನೆಲೆಯುಳ್ಳ ಸ್ಥಳಗಳಿದ್ದು, ಅವುಗಳಲ್ಲಿ ಹೋಬಳಿ ಕೇಂದ್ರವಾಗಿರುವ ಬೆಟ್ಟದಪುರವು ತನ್ನದೇಆದ ವಿಶಿಷ್ಟತೆಯನ್ನು ಪಡೆದುಕೊಂಡಿದೆ.

ಬೆಟ್ಟದಪುರ ಕ್ಷೇತ್ರವು, ದಿವ್ಯಕ್ಷೇತ್ರ ಎಂದೆನಿಸಿಕೊಂಡಿದೆ. ಮೈಸೂರಿನಿಂದ ಪಶ್ಚಿಮಕ್ಕೆ 80 ಕಿಲೊಮೀಟರ್, ಪಿರಿಯಾಪಟ್ಟಣದಿಂದ ಉತ್ತರಕ್ಕೆ ಕೇವಲ 16 ಕಿಲೊಮೀಟರ್ ದೂರದಲ್ಲಿದೆ. ಕೆ.ಆರ್. ನಗರ, ಮಡಿಕೇರಿ ಮತ್ತು ಪಿರಿಯಾಪಟ್ಟಣ–ಹಾಸನ ಈ ರಸ್ತೆಗಳು ಸಂಧಿಸುವ ಸ್ಥಳದಲ್ಲಿ ಬೆಟ್ಟದಪುರವಿದೆ.ಬೆಟ್ಟದಪುರದ ಆಗ್ನೇಯ ಭಾಗದಲ್ಲಿ ಶ್ರೀ ಶಿಡಿಲು ಮಲ್ಲಿಕಾರ್ಜುನಸ್ವಾಮಿ ಬೆಟ್ಟವಿದ್ದು, ಇದನ್ನು ತೀರ್ಥಂಕರ ಬೆಟ್ಟ, ಕುಡುಚಾದ್ರಿ, ವಿಜಯಗಿರಿ ಎಂದು ಕರೆಯಲಾಗುತ್ತಿತು. ಇಲ್ಲಿ ಇತಿಹಾಸ ಪ್ರಸಿದ್ಧವಾದ ಸಿಡಿಲು ಮಲ್ಲಿಕಾರ್ಜುನಸ್ವಾಮಿ ದೇವಾಲಯಗಳಂತಹ ಹತ್ತು ಹಲವು ದೇವಾಲಯಗಳು ಇವೆ.

ಈ ಕೃತಿಯ ಮೊದಲ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶವನ್ನು ಸವಿವರವಾಗಿ ತಿಳಿಸಲಾಗಿದೆ. ಈ ಕೃತಿಯ ಸ್ವರೂಪ ಮತ್ತು ವ್ಯಾಪ್ತಿಯನ್ನು ಸಂಶೋಧನಾ ದೃಷ್ಟಿಕೋನದಿಂದ ವಿವೇಚಿಸಲಾಗಿದೆ. ಮುಂದೆ ಬೆಟ್ಟದಪುರದ ಸ್ಥಳ ನಾಮದ ಬಗ್ಗೆ, ಸ್ಥಳದ ಮಹತ್ವ ಮತ್ತು ಮಹಿಮೆಯನ್ನು, ಊರಿನ ಸಮೀಕ್ಷೆಯನ್ನು ಮಾಡಲಾಗಿದೆ.

ಎರಡನೆ ಅಧ್ಯಾಯದಲ್ಲಿ ಬೆಟ್ಟದಪುರದ ಭೌಗೋಳಿಕ ಮಹತ್ವದ ಬೆಟ್ಟ, ಗುಡ್ಡಗಳು, ಖನಿಜಸಂಪನ್ಮೂಲಗಳು, ಕಿರು ಅರಣ್ಯ ಪ್ರದೇಶಗಳು ಹಾಗೂ ಇಲ್ಲಿನ ಐತಿಹಾಸಿಕ ಮಹತ್ವವನ್ನು ಮತ್ತು ಧಾರ್ಮಿಕ ಸ್ಥಿತಿಗತಿಗಳ ಬಗೆಗೆ ಸಾದರ ಪಡಿಸಲಾಗಿದೆ.

ಮೂರನೆ ಅಧ್ಯಾಯದಲ್ಲಿ ಬೆಟ್ಟದಪುರಕ್ಕೆ ಸಂಬಂಧಿಸಿದಂತೆ ಬೆಟ್ಟದಪುರದಲ್ಲಿ ಮತ್ತು ಅಕ್ಕಪಕ್ಕದಲ್ಲಿ ಸಿಕ್ಕಿರುವ ಶಾಸನಗಳ ಬಗೆಗೆ ವಿಸ್ತೃತವಾದ ಸಂಶೋಧನಾ ವಿವರಗಳನ್ನು ಸಾದರಪಡಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಬೆಟ್ಟದಪುರದ ಸುತ್ತ ಮುತ್ತಲಿನ ಗ್ರಾಮಗಳಾದ ಗೊರಹಳ್ಳಿ, ಅಲ್ಪಸಾಯಕನಹಳ್ಳಿ, ಬೆಟ್ಟದತುಂಗ ಮೊದಲಾದ ಗ್ರಾಮಗಳ ಜನ

ಸಮುದಾಯವನ್ನು ಧಾರ್ಮಿಕ ಮತ್ತು ಸಾಮಾಜಿಕ ಚೌಕಟ್ಟಿನಲ್ಲಿ ಗುರುತಿಸಲಾಗಿದ್ದು, ಇದರ ಬಗ್ಗೆ ಹೆಚ್ಚಿನ ಬೆಳಕು ಚೆಲ್ಲಲಾಗಿದೆ. ಅಲ್ಲದೇ ಬೆಟ್ಟದಪುರದಲ್ಲಿನ ಶಿಕ್ಷಣ ಸಂಸ್ಥೆಗಳು, ದೇವಸ್ಥಾನಗಳು, ಜಾತ್ರೆ, ರಥೋತ್ಸವ , ಹಬ್ಬಗಳು ಹಾಗೂ ಇಂದಿನ ಸ್ಥಿತಿಗತಿಗಳ ಬಗ್ಗೆ ತಿಳಿಸಲಾಗಿದೆ.

ಅಧ್ಯಾಯ ಐದರಲ್ಲಿ ಬೆಟ್ಟದಪುರದ ಅಭಿವೃದ್ಧಿಯಲ್ಲಿ ಪಾಲ್ಗೊಂಡಂತಹ ಪ್ರಮುಖ ಮಹನೀಯರುಗಳ ಬಗೆಗೆ ಮಾಹಿತಿಯನ್ನು ಸಂಗ್ರಹಿಸಿ ನೀಡಲಾಗಿದೆ.

ಅಧ್ಯಾಯ ಆರರಲ್ಲಿ ಇಲ್ಲಿನ ಜನರ ಶಿಕ್ಷಣದ ಜೊತೆಗೆ ಬೆಳೆದು ಬಂದಿರುವ ವ್ಯಾಪಾರ ವಾಣಿಜ್ಯದ ಬಗೆಗೆ ಸಂಶೋಧನಾ ವಿಚಾರಗಳನ್ನು ಸಾದರಪಡಿಸಲಾಗಿದೆ.

ಅಧ್ಯಾಯ ಏಳರಲ್ಲಿ ಈ ಅಧ್ಯಯನದಿಂದ ಉಂಟಾದ ಫಲಿತಗಳನ್ನು ಹಾಗೂ ಅನುಬಂಧ, ಪರಾಮರ್ಶನ ಗ್ರಂಥಗಳನ್ನು, ಕ್ಷೇತ್ರಕಾರ್ಯದ ವಿವರವನ್ನು, ಛಾಯಾಚಿತ್ರಗಳನ್ನು ನೀಡಲಾಗಿದೆ.

ಅಂತಿಮವಾಗಿ ನಕ್ಷೆಗಳನ್ನು ಸಂಗ್ರಹಿಸಿ ಮುದ್ರಿಸಲಾಗಿದೆ.

** ** **

# ಅಧ್ಯಾಯ – 2

# ಬೆಟ್ಟದಪುರದ ಐತಿಹಾಸಿಕ, ಧಾರ್ಮಿಕ ಮತ್ತು ಸಾಮಾಜಿಕ ಹಿನ್ನೆಲೆ

**ಐತಿಹಾಸಿಕ ಹಿನ್ನೆಲೆ:**

ಯಾವುದೇ ಊರು ಅಥವಾ ನಗರದ ಬಗ್ಗೆ ಖಚಿತವಾದ ಅದರಲ್ಲೂ ಲಿಖಿತವಾದ ಆಧಾರಗಳು ಸಿಗದ್ದಿದ ಪಕ್ಷದಲ್ಲಿ ರಚನೆಯ ಬಗ್ಗೆ ಹೇಳುವುದು ಕಷ್ಟಕರ. ಆದರೂ ಮೌಖಿಕವಾದ ಆಧಾರಗಳು ಉಳಿದು ಬಂದಿರುತ್ತೇವೆ ಅಂತಹವುಗಳಲ್ಲಿ ಜನಪದರ ಕಥೆ, ಕಾವ್ಯ, ಐತಿಹ್ಯಗಳಲ್ಲಿ ಮೌಖಿಕವಾದ ರೂಪುಗಳಲ್ಲಿ ಉಳಿದು ಬಂದಿರುತ್ತದೆ. ಇವುಗಳನ್ನು ಪೂರ್ಣ ಪ್ರಮಾಣದಲ್ಲಿ ನಂಬಲು ಅರ್ಹವಾಗಿಲ್ಲದಿದ್ದರು, ಇವುಗಳನ್ನು ಬಿಟ್ಟು ಬೇರೆ ಮಾರ್ಗಗಳಿರುವುದಿಲ್ಲ.

ಬೆಟ್ಟದಪುರ ಸುಮಾರು ಸಾವಿರ ವರ್ಷಗಳ ಹಿಂದಿನ ಊರು ಎಂಬುದು ತಿಳಿದುಬಂದಿದೆ. 20ನೇಯ ಶತಮಾನದಲ್ಲಿ ಜೈನ ಅರಸು 'ವಿಕ್ರಮರಾಯ' ನೆಂಬವವನು ನಂತರ ಅವನ ಮಗ 'ಚಂಗಲರಾಯ' ಎಂಬುವವನು ಈ ಊರನ್ನು ಕಟ್ಟಿಸಿದ್ದಾರೆಂದು ಪ್ರತೀತಿಯಿದೆ. ನಂತರ ಪಿರಿಯಾಪಟ್ಟಣದ 'ನಂಜರಾಜನ' ಕಾಲದಲ್ಲಿ ಜಹಗೀರು ಆಗಿದ್ದು ಮುಂದೆ ಮೈಸೂರು ಸಂಸ್ಥಾನಕ್ಕೆ ಸೇರಲ್ಪಟ್ಟಿತ್ತು.

ಹಾರನಹಳ್ಳಿಯಲ್ಲಿ ಸಿಕ್ಕ ಶಾಸನದಲ್ಲಿ ಬೆಟ್ಟದಪುರವನ್ನು 'ಭೈರವಪುರ'ವೆಂದು ಸಹಾ ಕರೆಯಲಾಗಿತ್ತು ಎಂದು ತಿಳಿದು ಬರುತ್ತದೆ. ಚೋಳರು ಆಳುತ್ತಿದ್ದ ಸಮಯದಲ್ಲಿ ಈ ಭಾಗದಲ್ಲಿ ಭೈರವ ಸಂಸ್ಕೃತಿಯು ಉತ್ತುಂಗದಲ್ಲಿದ್ದು, ಇದಕ್ಕೆ ಕೇಂದ್ರ ಸ್ಥಾನವಾಗಿ ಭೈರವಪುರ ಅರ್ಥಾತ ಬೆಟ್ಟದಪುರವು ಪ್ರಸಿದ್ದವಾಗಿತ್ತು. ಸಾಮಾನ್ಯವಾಗಿ ನೋಡುವುದಾದರೇ ಊರಿನ ಆಗ್ನೇಯ ಭಾಗಕ್ಕಿರುವ ಬೆಟ್ಟವೇ ಬೆಟ್ಟದಪುರ ಎಂದು ಹೆಸರು ಬರಲು ಕಾರಣವಾಗಿರಬೇಕು.

ಮತ್ತೊಂದು ಐತಿಹಾಸಿಕ ಆಧಾರದ ಪ್ರಕಾರ ಗಂಗ ಅರಸ ಎಂಬ ಪಾಳೆಯಗಾರನು ಈ ಬೆಟ್ಟದ ತಪ್ಪಲಿಗೆ ಬಂದಾಗ ಮೊಲವೊಂದು ಆತನ ಮೇಲೆ ತಿರುಗಿ ಬಿದ್ದರಿಂದ, ಆರ್ಶ್ಚಯಗೊಂಡು, ಇದು ಗಂಡುಭೂಮಿ ಎಂದು ತಿಳಿದು ಇದನ್ನೇ

ಮುಂದಿನ ರಾಜಧಾನಿಯಾಗಿ ಮಾಡಿಕೊಂಡು ಬೆಟ್ಟದಪುರ ಎಂದು ನಾಮಕರಣ ಮಾಡಿದನೆಂದು ಪ್ರತೀತಿಯಿದೆ.

ಡಾ.ಪಿ.ಕೆ. ರಾಜಶೇಖರ್ ಅವರು ಸಂಪಾದಿಸಿರುವ ಜಾನಪದ ಪಿರಿಯಾಪಟ್ಟಣ ಕಾಳಗ ಎಂಬ ಜನಪದ ಕಾವ್ಯದಲ್ಲಿ ಉಲ್ಲೇಖಿಸಿರುವಂತೆ, ಪಿರಿಯಾಪಟ್ಟಣದ ವೀರರಾಜನಿಗೂ ಮೈಸೂರಿನ ಅರಸರಿಗೂ ಯುದ್ಧ ಸಂಭವಿಸಿ, ಮೈಸೂರು ಅರಸರು ಬೆಟ್ಟದಪುರವನ್ನು ಕೊಳ್ಳೆಹೊಡೆದು ಇಲ್ಲಿನ ಕೋಟೆಯನ್ನು ನಾಶಪಡಿಸಿದರೆಂದು ತಿಳಿಸಲಾಗಿದೆ.

ಮೇಲಿನ ದಾಖಲೆಗಳ್ಯಾವುವು ಖಚಿತವಾದ ಆಧಾರವನ್ನು ನೀಡಿರುವುದಿಲ್ಲ, ಆದರೆ ಇಲ್ಲಿನ ದೇವಾಲಯಗಳು ಚೋಳರ ಕಾಲದಲ್ಲಿ ನಿರ್ಮಾಣವಾಗಿದ್ದು, ಚೋಳರ ರಚನೆ, ವಾಸ್ತುಶಿಲ್ಪ ಕೆಲವು ಲಕ್ಷಣಗಳನ್ನು ಇಲ್ಲಿನ ದೇವಾಲಯಗಳಲ್ಲಿ ಕಾಣಬಹುದು. ಇದರ ಹೊರತಾಗಿ ಊರಿನ ಇತಿಹಾಸವನ್ನು ಪ್ರತಿಪಾದಿಸಿದ ಯಾವ ದಾಖಲೆಗಳು ಲಭ್ಯವಾಗಿಲ್ಲ.

ಸ್ಥಳ ಪುರಾಣದ ಪ್ರಕಾರ ಶ್ರೀ ಸಿಡಿಲು ಮಲ್ಲಿಕಾರ್ಜುನಸ್ವಾಮಿ ಬೆಟ್ಟಕ್ಕೆ, ಹಿಂದೆ ತೀರ್ಥಂಕರ ಬೆಟ್ಟ, ಕುಡುಚಾದ್ರಿ, ವಿಜಯಗಿರಿ ಮುಂತಾದ ಹೆಸರುಗಳಿದ್ದವೆಂದು ತಿಳಿದುಬರುತ್ತವೆ.ತೀರ್ಥಂಕರ ಬೆಟ್ಟ ಎಂದು ಕರೆಯಲು ಜೈನ ಕೇಂದ್ರವಾಗಿತ್ತೆಂದು. ಇದಕ್ಕೆ ಪುಷ್ಟಿಯನ್ನು ನೀಡುವಂತೇ ಪಿರಿಯಾಪಟ್ಟಣದಲ್ಲಿ ರಾಜ್ಯ ಸ್ಥಾಪನೆ ಮಾಡಿದ ನಂತರ ವಿಕ್ರಮ ಚಂಗಾಳದವನ್ನು ಈ ಸ್ಥಳದ ತುಂಗಾ(ಬೆಟ್ಟದತುಂಗ?) ಎಂಬಲ್ಲಿಗೆ ಬಂದು ಸುತ್ತಮುತ್ತಲ ಬೇಡರನ್ನು ಸೋಲಿಸಿ ತೀರ್ಥಂಕರ ಬೆಟ್ಟದ ಬಳಿ ಬೀಡು ಬಿಟ್ಟಿದ್ದಾಗ, ಮೊಲವೊಂದು ಬೇಟೆ ನಾಯಕನ್ನು ಅಟ್ಟಿಸಿಕೊಂಡು ಹೋಗುತ್ತಿದ್ದ ದೃಶ್ಯವನ್ನು ಕಂಡು ಈ ಭೂಮಿಯು ರಾಜ್ಯ ಸ್ಥಾಪನೆಗೆ ಪ್ರಶಸ್ತ್ಯವೆಂದು, ಬೆಟ್ಟದಪುರವೆಂದು ನಾಮಕರಣ ಮಾಡಿ ಬೆಟ್ಟದಪುರ ನಿರ್ಮಿಸಿ ಮಗ ಚಂಗಲರಾಯನಿಗೆ ಅಧಿಕಾರ ವಹಿಸಿಕೊಟ್ಟನು ಎಂದು ಹೇಳಲಾಗಿದೆ.

ಸುಮಾರು 16ನೇ ಶತಮಾನದಲ್ಲಿ ಚಂಗಾಳದ ಅರಸನಾಗಿದ್ದ ನಂಜರಾಜನಿಗೂ ವಿಜಯನಗರದ ಕೃಷ್ಣದೇವರಾಯನಿಗೂ ಯುದ್ಧ ನಡೆದಿರಬಹುದು ಎಂದು ನಂಬಲಾಗಿದೆ. ಇದರಿಂದಾಗಿ ಇಲ್ಲಿ ವೈಷ್ಣವ ಹಾಗೂ ಶೈವ ಧರ್ಮ ಪಂಥಗಳು ತಲೆಯೆತ್ತಲೂ ಅವಕಾಶವಾಯಿತು, ಜೊತೆಗೆ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಜೈನ ಧರ್ಮವು

ಅನಾಥವಾಗಲೂ ಆರಂಭಿಸಿತ್ತು. ಇದಕ್ಕೆ ಆಧಾರವೆಂಬಂತೆ ಬೆಟ್ಟದಪುರದ ಮಲ್ಲಿನಾಥ ಬಸದಿ, ಮಲ್ಲಿಕಾರ್ಜುನ ಸ್ವಾಮಿ ದೇವಾಲಯವಾಗಿ ಪರಿವರ್ತಿವಾಗಿರುವುದು ಐತಿಹ್ಯಗಳಿಂದ ತಿಳಿದು ಬಂದಿದೆ. ನಂತರದ ಕಾಲದಲ್ಲಿ ಬೆಟ್ಟದಪುರದಲ್ಲಿ ಸಿಕ್ಕಿರುವ ಎಲ್ಲಾ ಶಾಸನಗಳಲ್ಲಿ ಹಾಗೂ ಸುತ್ತಮುತ್ತಲ ಗ್ರಾಮಗಳಲ್ಲಿ ದೊರೆತಿರುವ ಶಾಸನಗಳಲ್ಲಿ ಶ್ರೀ ಅನ್ನದಾನಿ ಮಲ್ಲಿಕಾರ್ಜುನ ಎಂದೇ ಕರೆಯಲಾಗಿದ್ದು ದಾನದತ್ತಿಗಳನ್ನು ಬಿಟ್ಟಿರುವ ವಿವರಗಳು ಸಿಕ್ಕುತ್ತೇವೆ.

ವಿಜಯಗಿರಿ ಎಂದು ಹೆಸರು ಬರಲು ಶಿಷ್ಟ ಪುರಾಣಗಳಲ್ಲಿ ಆಧಾರವಿದೆ. ಕವಿರಾಮಶರ್ಮ(ಆರ್.ರಾಮಣ್ಣ) ಬೇಗೂರು ರವರು ರಚಿಸಿರುವ 'ಶ್ರೀ ವಿಜಯಗಿರಿ ಮಹಾತ್ಮ್ಯ' ಎಂಬ ಕೃತಿಯಲ್ಲಿ, ವಿಜಯನೂ ಮತ್ತು ಶ್ರೀಶೈಲನೂ ಮತ್ತು ಪಾರ್ವತಿಯು ಈ ಮೂವರು ಪರ್ವತರಾಜನ ಮಕ್ಕಳು. ಈಶ್ವರನ್ನು ಪಾರ್ವತಿಯನ್ನು ಮದುವೆಯಾದ ಮೇಲೆ ಅವರಿಗೆ ಶಿವನು ಮನ್ನಣೆಯ ಭಾವನಾದನು. ಆದರೆ ಆನೇಕ ದಿನಗಳು ಉರುಳಿದರೂ ಶಿವನು ವಿಜಯನ ಮನೆಗೆ ಹೋಗದಿದ್ದ ಕಾರಣದಿಂದ ಖಿನ್ನನಾದ ವಿಜಯನು ತಪಸ್ಸನ್ನು ಆಚರಿಸಿ ಶಿವನನ್ನು ಒಲಿಸಿಕೊಂಡು ಅವನ ಪ್ರೀತಿಗೆ ಪಾತ್ರವಾದನು. ಈ ಕಾರಣದಿಂದ ಮತ್ತು ವಿಜಯನಿಗೆ ಶಿವ ಈ ಬೆಟ್ಟದಲ್ಲಿ ಪ್ರತ್ಯಕ್ಷನಾಗಿದ್ದರಿಂದ ಇದಕ್ಕೆ ವಿಜಯಗಿರಿ ಎಂದು ಹೆಸರು ಬಂದಿತು ಎಂದಿದ್ದಾರೆ. ಈ ರೀತಿಯಾಗಿ ಶ್ರೀಶೈಲದ ಶಿವನು ಈ ಬೆಟ್ಟದಲ್ಲಿ ಬಂದು ಪಾರ್ವತಿ ಸಮೇತ ನೆಲೆಸಿದ್ದು ಇಲ್ಲಿ ಮಲ್ಲಿಕಾರ್ಜುನನಾದ ಎಂದು ಹೇಳಲಾಗಿದೆ.ಇವರ ಮತ್ತೊಂದು ಕಥೆಯಲ್ಲಿ ನಾರದರು ಒಮ್ಮೆ ಶಿವನನ್ನು ಕಾಣಲು ಶ್ರೀಶೈಲ ಪರ್ವತಕ್ಕೆ ತೆರಳುತ್ತಿರುತ್ತಾರೆ. ಭಕ್ತಿಭಾವದಲ್ಲಿ ಮೈಮರೆತು ಶಿವನ ಸ್ತುತಿಯಲ್ಲಿ ಮಗ್ನರಾಗಿ ವಿಜಯಗಿರಿ ಮಾರ್ಗವಾಗಿ ತೆರಳುತ್ತಿರುವಾಗ, ಅಲ್ಲಿಯೇ ನೆಲೆಸಿದ್ದ ಶಿವನು ನಾರದರು ತನ್ನನ್ನು ಗುರುತಿಸಲ್ಲಿವಲ್ಲ, ಎಂದು ಅವರ ಕೈಯಲ್ಲಿದ್ದ ವೀಣೆಯನ್ನು ಬೀಳುವಂತೆ ಮಾಡುತ್ತಾನೆ, ಇದರಿಂದ ಬೇಸರಗೊಂಡ ನಾರದರು ಅಲ್ಲಿದ್ದ ಮಹಾಶಿವ ಭಕ್ತನಾದ 'ನಟ'ನ ಸಲಹೆಯಂತೆ ಮಹಾತಪಸ್ಸನು ಆಚರಿಸಿ ಶಿವನನ್ನು ಮೆಚ್ಚಿಸುತ್ತಾರೆ. ಭಕ್ತಿಗೆ ಮೆಚ್ಚಿದ ಶಿವ ಪ್ರತ್ಯಕ್ಷವಾಗಿ ವೀಣೆಯನ್ನು ಕೊಡುತ್ತಾನೆ. ಶಿವನಿಂದ ಕೊಡಲ್ಪಟ್ಟು ವೀಣೆಯಾದರಿಂದ ಇದಕ್ಕೆ ಮೆಹತೀವೀಣೆ ಎಂದು ಹೆಸರಾಯಿತೆಂದೂ ಈ ಕಾರಣದಿಂದ ಈ ಬೆಟ್ಟವು ವೀಣಾದ್ರಿ ಎಂಬ ಹೆಸರು ಪಡೆಯಿತೆಂದು ಹೇಳಲಾಗಿದೆ.

**ಧಾರ್ಮಿಕ ಹಿನ್ನೆಲೆ:**

ಬೆಟ್ಟದಪುರವು ಧಾರ್ಮಿಕವಾಗಿ ಬದಲಾವಣೆಗೆ ತೆರೆದುಕೊಂಡಿರುವ ಊರಾಗಿದೆ. 10-11ನೇ ಶತಮಾನದಲ್ಲಿ ಚಂಗಾಳ್ವರ ಈ ಕಾಲದಲ್ಲಿ ಇದು ಪ್ರಮುಖ ಜೈನ ಕೇಂದ್ರವಾಗಿತ್ತು. ಜೈನ ಧರ್ಮಿಯರು ಇಲ್ಲಿ ಹೆಚ್ಚಾಗಿ ನೆಲೆಸಿದ್ದರೆಂದು ಇಲ್ಲಿನ ಜೈನ ಬಸದಿಗಳೇ ಸಾಕ್ಷಿ ಹೇಳುತ್ತವೆ. ಆದರೂ ಅವುಗಳೆಲ್ಲವು ನಾಶವಾಗುವ ಹಂತದಲ್ಲಿರುವುದು ವಿಷಾದಕರವಾದ ಸಂಗತಿಯಾಗಿದೆ. ಬಹುಪಾಲು ಹಾಳು ಬಿದ್ದಿವೆ. ಬೆಟ್ಟದಪುರದ ಹನಸೋಗೆ, ಭೂವನಹಳ್ಳಿ, ಬೆಕ್ಕರೆ, ಬೆಟ್ಟದತುಂಗಗಳಲ್ಲಿ ನಾಶವಾಗಿರುವ ಬಸದಿಗಳ ಅವಶೇಷಗಳಿವೆ. ಹನಸೋಗೆ ಮತ್ತು ಆನಿವಾಳು ಗ್ರಾಮಗಳಲ್ಲಿ ಪೂಜೆ ಇನ್ನೂ ಚಾಲ್ತಿಯಲ್ಲಿದೆ. ಆನಂತರದಲ್ಲಿ ಪಿರಿಯಾಪಟ್ಟಣದ ಚಂಗಾಳ್ವರು ವೀರಶೈವರಾಗಿ ಮತ್ತು ವೈಷ್ಣವರಾಗಿ ಮತಾಂತರಗೊಂಡರು.

ಐತಿಹಾಸಿಕ ಹಿನ್ನೆಲೆಯನ್ನು ವಿವರಿಸುವಾಗ ಹೇಳಿದಂತೇ, ಸಿಡಿಲು ಮಲ್ಲಿಕಾರ್ಜುನ ಸ್ವಾಮಿ ಅಥವಾ ಸಿಡ್ಲುಮಲ್ಲಿಕಾರ್ಜುನಸ್ವಾಮಿ ಬೆಟ್ಟವಿದೆ. ಇದು ಜೈನ ತೀರ್ಥಂಕರ ಬೆಟ್ಟವಾಗಿತ್ತು. ಎಂಬುದು ಜೈನಧರ್ಮದ ಸ್ಥಾನವನ್ನು ಬಲಿಷ್ಟವಾಗಿಸಿದೆ. ವಿಜಯ ನಗರ ಸಾಮ್ರಾಜ್ಯದ ಉತ್ತುಂಗ ಸ್ಥಿತಿಯಲ್ಲಿ ಇಲ್ಲಿ ವೈಷ್ಣವ ಧರ್ಮ ವ್ಯಾಪಕವಾಗಿ ಹರಡಿದಂತೆ ಕಂಡುಬರುತ್ತದೆ. ವಿಜಯನಗರದ ಅರಸರಿಗೂ ಇಲ್ಲಿನ ಚಂಗಾಳ್ವ ವಂಶದ ನಂಜರಾಜನಿಗೂ ಯುದ್ದ ನೆಡೆದಿರಬಹುದೆಂದು, ಅದಾದ ನಂತರ ವೈಷ್ಣವ ಹಾಗೂ ಶೈವ ಧರ್ಮಗಳು ಪ್ರಬಲಗೊಂಡವು. ಆನಂತರ ಜೈನ ಧರ್ಮದ ಭದ್ರ ಬುನಾದಿಯು ಕಳಚಿಕೊಂಡು ನಿಧಾನವಾಗಿ ಅನಾಥವಾಗುತ್ತಾ ಬಂದಿತು. ಹಲವು ಬಸದಿಗಳು ದೇವಸ್ಥಾನಗಳಾಗಿ ಪರಿವರ್ತಿತಗೊಂಡವು. ಮಲ್ಲಿನಾಥ ಬಸದಿಯು (ತೀರ್ಥಂಕರ ಬಸದಿ) ಮಲ್ಲಿಕಾರ್ಜುನ ದೇವಾಲಯಗಳಾಗಿ ಪರಿವರ್ತಿತಗೊಂಡಿತು. ಇದು ಚಂಗಾಳ್ವರ ಸೀಮೆಯಾಗಿದ್ದರಿಂದ ಧಾರ್ಮಿಕ ಏರುಪೇರುಗಳು ನಿಚ್ಚಳವಾಗಿ ಗೋಚರಿಸತೊಡಗಿದವು.

16ನೇ ಶತಮಾನದಲ್ಲಿ ರಾಜಕೀಯ ಕ್ಷೋಭೆಗಳಿಂದಾಗಿ, ವಿಜಯನಗರ ಸಾಮ್ರಾಜ್ಯದ ಅವನತಿಯಿಂದಾಗಿ, ಮುಸ್ಲಿಂರ ಆಕ್ರಮಣದಿಂದಾಗಿ ಕರ್ನಾಟಕದ ಬಹುಭಾಗಗಳಲ್ಲಿ ಮುಸ್ಲಿಂರ ಸ್ಥಾನವು ವಿಸ್ತಾರಗೊಂಡಿತು. ಆಡಳಿತ ವಿಸ್ತರಣೆಯಾಗಿ ಮುಸ್ಲಿಂ ಧರ್ಮಾಂತರಕ್ಕೆ ನಾಂದಿಯಾಯಿತು. ಆ ಸಂದರ್ಭದಲ್ಲಿಯೇ ಈ ಊರಿನಲ್ಲಿಯು

ಮುಸ್ಲಿಂ ಧರ್ಮ ಹುಟ್ಟಿಕೊಳ್ಳಲೂ ಸಾಧ್ಯವಾಗಿದ್ದು. ನಂತರ ಹಲಗನಹಳ್ಳಿ, ಚಿಕ್ಕನೇರಳೆ, ಈಚೂರು ಮುಂತಾದ ಅಕ್ಕಪಕ್ಕದ ಗ್ರಾಮಗಳಿಗೆ ಇಸ್ಲಾಂ ಧರ್ಮವು ಹರಡಲು ಕಾರಣವಾಯಿತು.

ಬೆಟ್ಟದಪುರದ ಶ್ರೀ ಚಿಕ್ಕವೀರದೇಶಿಕೇಂದ್ರಸ್ವಾಮಿ ವಿರಕ್ತಮಠವನ್ನು ಹೆಸರಿಸಲೇ–ಬೇಕಾಗುತ್ತದೆ. ಇವರು ತಮ್ಮ 1927ರ ಮರಣ ಶಾಸನದಲ್ಲಿ, ಇದು ಸ್ವತಂತ್ರ ವಿರಕ್ತಮಠವೆಂದು ಹೇಳಿದ್ದಾರೆ. ಈ ಮಠವು ಚಂಗಾಳ್ವರ ಕಾಲದಲ್ಲಿ ಎಡೆಯೂರು ಸಿದ್ದಲಿಂಗೇಶ್ವರರ ಕಾಲದಲ್ಲಿ ಆರಂಭಗೊಂಡಿರಬಹುದೆಂದು ಹೇಳಬಹುದು. ಶ್ರೀ ಚಿಕ್ಕವೀರದೇಶಿಕೇಂದ್ರಸ್ವಾಮಿಗಳ ಕಾಲದಲ್ಲಿ ಹೆಚ್ಚು ಪ್ರಸಿದ್ದಿಗೆ ಬಂದಿತು. ಇದೊಂದು ಬಸವ ಪರಂಪರೆಯ ಮಠವೆಂದು ಗುರುತಿಸಿಕೊಂಡಿದೆ. ಕೆಲವರ ಹೇಳಿಕೆ ಪ್ರಕಾರ ಚೌಡೇಶ್ವರಿ ಮಠವಾಗಿತ್ತೆಂದು ಅದಕ್ಕೆ ಸಾಕ್ಷ್ಯಾಧಾರಗಳು ಮಠದಲ್ಲಿಯೇ ಸಿಗುತ್ತದೆ ಎಂದು ಕೊಡಗಿನ ಕುಟ್ಟಾದಲ್ಲಿನ ಚಂಗಾಳ್ವ ವಂಶಸ್ಥರೊಬ್ಬರು ಹೇಳಿಕೊಳ್ಳುತ್ತಾರೆ, ಮಠದ ನೈರುತ್ಯ ದಿಕ್ಕಿನಲ್ಲಿರುವ ಚಿಕ್ಕದಾದ ಚೌಡೇಶ್ವರಿ ದೇವಾಲಯವಿದ್ದು ಇದಕ್ಕೆ ಪುಷ್ಠಿ ನೀಡುತ್ತದೆ. ಈ ಮಠವು ಶಿಕ್ಷಣ ಸಂಸ್ಥೆಗಳ ಮೂಲಕವಾಗಿ ಜ್ಞಾನ ತುಂಬುದರ ಜೊತೆಗೆ ವಿವಾಹ ಕಾರ್ಯಕ್ರಮಗಳಿಗಾಗಿ ಸಹಕಾರಿಯಾಗುವಂತೆ ಕಲ್ಯಾಣ ಮಂಟಪವನ್ನು ರೂಪಿಸಿದೆ. ಎಲ್ಲಾ ವರ್ಗದ ಜನರು ಮಠಕ್ಕೆ ಭಕ್ತಿ ಭಾವದಿಂದ ನಡೆದುಕೊಳ್ಳವರು. ಇತ್ತೀಚೆಗೆ ಬೆಟ್ಟದಪುರದಲ್ಲಿ ಕ್ರೈಸ್ತ ಮತದ ಬೆಳವಣಿಗೆಯಾಗುತ್ತಿದ್ದು ಚರ್ಚೊಂದನ್ನು ಊರಿನ ದಕ್ಷಿಣ ದಿಕ್ಕಿನಲ್ಲಿ ಸ್ಥಾಪಿಸಲಾಗಿದೆ.

ಒಟ್ಟಾರೆಯಾಗಿ ಬೆಟ್ಟದಪುರದಲ್ಲಿ ಹಿಂದೂ ಧರ್ಮದವರಾದ ಶೈವರು, ವೈಷ್ಣವರು ಹಾಗೂ ಇತರರು, ಮುಸ್ಲಿಂರು ಮತ್ತು ಕ್ರಿಶ್ಚಿಯನ್ನರು ಜೊತೆಯಾಗಿ, ಸಾಮರಸ್ಯವಾಗಿ ಬದುಕುತಿದ್ದು, ವೈವಿಧ್ಯತೆಯಲ್ಲಿ ಏಕತೆಯನ್ನು ಹೊಂದಿಕೊಂಡು ಅನ್ಯೋನ್ಯವಾದ ಜೀವನವನ್ನು ಸಾಗಿಸುತ್ತಿದ್ದಾರೆ.

**ಸಾಮಾಜಿಕ ಹಿನ್ನೆಲೆ:**

ಬೆಟ್ಟದಪುರವು ಸಾಮಾಜಿಕವಾಗಿ ವೈವಿಧ್ಯತೆಯನ್ನು ಪಡೆದು–ಕೊಂಡಂತಹದ್ದಾಗಿದೆ, ವಿಭಿನ್ನ ಧರ್ಮ, ಜಾತಿ, ಜನಸಮುದಾಯವನ್ನು ಹೊಂದಿರುವ ವಿಭಿನ್ನ ಧರ್ಮಿಯರ, ವಿಭಿನ್ನವಾದ ಆಚಾರ–ವಿಚಾರಗಳ ಉಡುಗೆ, ತೊಡುಗೆಗಳನ್ನು,

ವಿವಿಧ ಭಾಷೆಯನ್ನು ಒಳಗೊಂಡ ಐಕ್ಯತೆಯ ಗೂಡಾಗಿದೆ. ಇಲ್ಲಿ ಹಿಂದೂ ಧರ್ಮದ ಬ್ರಾಹ್ಮಣರು, ಒಬ್ಬೂರುರಮ್ಮೆಗಳು, ವೀರಶೈವರು, ಉಪ್ಪಾರರು, ಒಕ್ಕಲಿಗರು, ನಾಯಕ, ಅರಸುಜಾಗ, ಹರಿಜನ, ವಿಶ್ವಕರ್ಮ,ಅಗಸರು, ನಾಮಧಾರಿಗೌಡರು,ಸಂಕೇತಿ ಬ್ರಾಹ್ಮಣರು, ಇವರುಗಳಲ್ಲದೆ ಬೇರೆ ಕಡೆಯಿಂದ ಬಂದು ವ್ಯಾಪಾರ, ವಾಣಿಜ್ಯ ವಹಿವಾಟುಗಳಲ್ಲಿ ತಮ್ಮನಲ್ಲಿ ತೊಡಗಿಸಿಕೊಂಡಿರುವ ರಾಜಾಸ್ಥಾನದ ಸೇಟುಗಳು, ಕೇರಳದ ಕಾಕಾಗಳು ಅಲ್ಲದೇ ಮುಸ್ಲಿಂರು, ಅಲ್ಪ ಪ್ರಮಾಣದಲ್ಲಿ ಕ್ರೈಸ್ತರು ವಾಸಿಸುತ್ತಿದ್ದಾರೆ.

ಊರಿನಲ್ಲಿರುವ ಪ್ರಮುಖವಾದ ಬೀದಿಗಳು ಎಂದರೇ ತೇರಿನಬೀದಿ, ದೇವಸ್ಥಾನದಬೀದಿ, ಉಪ್ಪಾರಬೀದಿ, ಸಂಕೇತಿಬೀದಿ, ಸುಣ್ಣದಕೇರಿ. ಹೀಗೆ ಬೇರೆ ಬೇರೆ ಜನಾಂಗದವರು ವಾಸಿಸುವ ಕೇರಿಗಳಿಗೆ ಒಂದೊಂದು ಹೆಸರುಗಳನ್ನಿಡಲಾಗಿದೆ. ಪ್ರತಿ ವರ್ಷ ಜರುಗುವ ಸಿದ್ಲುಮಲ್ಲಿಕಾರ್ಜುನ ಸ್ವಾಮಿ ರಥೋತ್ಸವ ನಡೆದಾಗ ತೇರಿನಬೀದಿಯಲ್ಲಿ ಮಾತ್ರ ರಥ ಎಳೆಯಲಾಗುತ್ತದೆ. ಹಾಗಾಗಿ ರಥ ಬೀದಿ ಎಂದು ಕರೆಯಲಾಗುತ್ತಿದ್ದು, ಈ ಬೀದಿಯಲ್ಲಿ ಬಹುಪಾಲು ವೀರಶೈವರು, ಬ್ರಾಹ್ಮಣರು ನೆಲೆಸಿದ್ದಾರೆ. ಹಲವು ಧರ್ಮಗಳು ವಿಭಿನ್ನ ಸಂಸ್ಕೃತಿಯನ್ನು ಹೊಂದಿದ್ದರು, ಯಾವುದೇ ಜಾತಿವಾದಗಳಿಗೆ, ಕೋಮು ಗಲಭೆಗಳಿಗೆ ಕಿಂಚಿತ್ತು ಆಸ್ಪದ ಕೊಡುವುದು ಕಡಿಮೆ. ಬಹುತೇಕ ಎಲ್ಲರೂ ಸಹಕಾರ ದೃಷ್ಟಿಯಿಂದ ಉತ್ತಮ ವ್ಯವಹಾರ ಜ್ಞಾನದಿಂದಾಗಿ ಜೀವನ ಸಾಗಿಸುತ್ತಿದ್ದಾರೆ.

ಜೀವ ವಿಧಾನವು ವಿಭಿನ್ನವಾಗಿದೆ, ಇಲ್ಲಿ ನೆಲೆಸಿರುವ ಹಿಂದೂಗಳ ಪದ್ಧತಿ, ನಂಬಿಕೆ, ಆಚರಣೆಗಳು ವಿಶಿಷ್ಟವಾದವುಗಳಾಗಿದೆ. ಎಲ್ಲಾ ಕಡೆಗಳಲ್ಲೂ ನಡೆದು ಬಂದಿರುವಂತಹ ಹಬ್ಬಗಳಾದ ಪಿತೃಪಕ್ಷ, ಗೌರಿಗಣೇಶ, ದೀಪಾವಳಿ, ಸಂಕ್ರಾತಿ, ಮಹಾಶಿವರಾತ್ರಿ, ಯುಗಾದಿ, ಹಬ್ಬಗಳನ್ನು ಆಚರಿಸಿದರೇ, ಮುಸ್ಲಿಂರು ರಂಜಾನ್, ಬಕ್ರೀದ್ ಮುಂತಾದ ಹಬ್ಬಗಳನ್ನು ಕ್ರೈಸ್ತರು ಗುಡ್‌ಪ್ರೈಡೇ, ಕ್ರಿಸ್‌ಮಸ್ ಹಬ್ಬಗಳನ್ನು ಆಚರಿಸುತ್ತಾರೆ. ಈ ಆಚರಣೆಗಳು ಕೇವಲ ಆಯಾಯ ಧರ್ಮಿಯರಿಗೆ ಮಾತ್ರವಾಗಿರದೇ ಅನ್ಯಧರ್ಮಿಯರು ಧರ್ಮ ಬೇಧವಿಲ್ಲದೇ ಆಚರಣೆಗಳಲ್ಲಿ ಪಾಲ್ಗೊಳುತ್ತಾರೆ. ಧರ್ಮದ ಆಚಾರ-ವಿಚಾರ, ಆಚರಣೆಗಳು, ಜನನ, ಮರಣ, ವಿವಾಹ, ನಾಮಕರಣ ಇವೇ ಮೊದಲಾದವುಗಳು ಆಯಾಯಾ ಧರ್ಮದ ಅನುಸಾರವಾಗಿಯೇ ನಡೆಯುತ್ತವೆ. ಪ್ರತಿ

ವರ್ಷವು ಬೆಟ್ಟದಪುರದಲ್ಲಿ ವೈಭವೋಪೇತವಾಗಿ ಹಬ್ಬಹರಿದಿನಗಳನ್ನು ಆಚರಿಸ-ಲಾಗುತ್ತದೆ, ಇಲ್ಲಿನ ವಿಶಿಷ್ಟವಾದ ಹಬ್ಬಗಳೆಂದರೇ, ಶ್ರೀಸಿಡ್ಲುಮಲ್ಲಿಕಾರ್ಜುನ ಸ್ವಾಮಿಯ ರಥೋತ್ಸವ ಹಾಗೂ ಪಂಜಿನ ಮೆರವಣಿಗೆ. ಸುತ್ತಮುತ್ತಲಿನ ಗ್ರಾಮಗಳಲ್ಲಿನ ಜನರು ಭಕ್ತಿ–ಶ್ರದ್ದೆಗಳಿಂದ ಈ ಆಚರಣೆಯಲ್ಲಿ ಪಾಲ್ಗೊಳುತ್ತಾರೆ. ಪಂಜಿನ ಮೆರವಣಿಗೆಯ ಮೂಲಕವಾಗಿ ಎಲ್ಲರ ಮನದಲ್ಲಿ ಜ್ಞಾನದ ದೀಪ ಮೊಳಗುವಂತಾಗಲೀ ಎಂಬ ಅಭಿಲಾಷೆಯು ಇದ್ದಿರಬಹುದು, ಇದು ನಂಬಿಕೆಯು ಕೂಡಾ. ಎಳ್ಳು–ಬೆಲ್ಲವನ್ನು ಹಂಚಿ ಒಳ್ಳೆ ಮಾತಾಡಬೇಕು, ಬೇವು–ಬೆಲ್ಲ ತಿಂದು ಕಷ್ಟ ಸುಖಗಳನ್ನು ಸಮವಾಗಿ ಸ್ವೀಕರಿಸಬೇಕು ಎಂಬ ನಂಬಿಕೆ ಹಿಂದೂಗಳಲ್ಲಿ ನೆಲೆಸಿದೆ.

**ಉಡುಗೆ ತೊಡುಗೆ:**

ವಿಶ್ವದ ಪ್ರತಿಯೊಂದು ಜನಾಂಗವು ತನ್ನದೇಆದ ವಿಶಿಷ್ಟ ವಿನ್ಯಾಸ ಉಡುಗೆ–ತೊಡುಗೆಯನ್ನು ಹೊಂದಿರುತ್ತದೆ. ಅಲ್ಲಿನ ಪರಿಸರದ ಪ್ರಭಾವ ಅವರ ಉಡುಗೆ–ತೊಡುಗೆಯ ಮೇಲೆ ಪ್ರಭಾವ ಬೀರುವುದು ನಿಚ್ಚಳವಾಗಿದೆ. ಬೆಟ್ಟದಪುರದ ಭಾಗದಲ್ಲಿರುವ ಜನರು ಎಲ್ಲಾ ಭಾಗದಲ್ಲಿ ಸಾಮಾನ್ಯವಾಗಿ ತೊಡುವ ವೇಷ ಭೂಷಣವನ್ನು ತೊಡುತ್ತಾರೆ. ಬೇಸಿಗೆಯಲ್ಲಿ ತೆಳುವಾದ ಉಡುಪುಗಳನ್ನು ಚಳಿಗಾಲದಲ್ಲಿ ಬೆಚ್ಚನೆಯ ಉಣ್ಣೆಯ ಬಟ್ಟೆಗಳನ್ನು, ಸ್ವೆಟರ್‌ಗಳನ್ನು ತೊಡುತ್ತಾರೆ. ವಿಶೇಷವಾದ ಕಾರ್ಯಕ್ರಮಗಳಿಗೆ ಅವರ ಆರ್ಥಿಕ ಪರಿಸ್ಥಿಗೆ ಅನುಗುಣವಾಗಿ ಬಟ್ಟೆಗಳನ್ನು ಧರಿಸುತ್ತಾರೆ.

ಹೆಂಗಸರು ಕುಂಕುಮ, ಹಣೆಬೊಟ್ಟು, ದೃಷ್ಟಿಬೊಟ್ಟುಗಳನ್ನು ಹಾಕಿಕೊಳ್ಳುತ್ತಾರೆ, ವಿರಳವಾಗಿ ಹಣೆಗೆ ಗಂಧವನ್ನು ಹಚ್ಚಿಕೊಳ್ಳುತ್ತಾರೆ. ಕೆನ್ನೆಗೆ ಅರಿಸಿಣವನ್ನು ಸವರಿಕೊಳ್ಳುವುದು ರೂಢಿಯಲ್ಲಿದ್ದರು ಕೂಡಾ, ಇತ್ತೀಚೆಗೆ ಕಣ್ಮರೆಯಾಗುತ್ತಿದೆ. ಹುಡುಗಿಯರು ಜಡೆಯನ್ನು ಹಾಕಿಕೊಳ್ಳುತ್ತಾರೆ, ಸಾಮಾನ್ಯವಾಗಿ ಎಲ್ಲ ಹೆಂಗಸರು ಮತ್ತು ಹೆಣ್ಣು ಮಕ್ಕಳು ಕಾಲಿಗೆ ಗೆಜ್ಜೆ, ಕತ್ತಿಗೆ ಸರ, ನಕ್ಲೇಸ್, ಕಿವಿಗೆ ಓಲೆ, ಹ್ಯಾಂಗಿಗ್ಸ್, ಮಾಟಿ, ಮೂಗಬೊಟ್ಟು, ಕೈಗೆ ಗಾಜಿನ ಬಳೆ, ಜೊತೆಗೆ ಚಿನ್ನದ ಬಳೆಗಳನ್ನು ಬೆರಳುಗಳಿಗೆ ಉಂಗುರವನ್ನು ತೊಡುತ್ತಾರೆ. ಪುರುಷರು ಕುತ್ತಿಗೆ ಸರ, ಕೈಬೆರಳಿಗೆ ಉಂಗುರ, ಕೈಕಪ್ಪವನ್ನು ಧರಿಸುತ್ತಾರೆ. 'ಮೈಸೂರು ಪೇಟ'ವನ್ನು ವಿಶೇಷವಾಗಿ ಹಿಂದೂ ಗಂಡಸರ

ವಿವಾಹದ ದಿನದಂದು ಧರಿಸುವುದು ವಾಡಿಕೆಯಾಗಿದೆ. ಹಬ್ಬ ಹರಿದಿನ, ಕಾರ್ಯಕ್ರಮಗಳ ದಿನದಂದು ಅವರ ಅನುಕೂಲಕ್ಕೆ ತಕ್ಕಂತೆ ಬಟ್ಟೆಗಳನ್ನು ಧರಿಸುವರು.

ಮುಸ್ಲಿಂಮರ ಉಡುಗೆ–ತೊಡುಗೆಯನ್ನು ನೋಡುವುದಾದರೇ ಹೆಂಗಸರು ಪೈಜಾಮ, ಜುಬ್ಬಾ, ಸೀರೆ, ನೈಟಿಯನ್ನು ಧರಿಸುತ್ತಾರೆ ಇದರ ಜೊತೆಗೆ ಬುರ್ಖಾವನ್ನು ಧರಿಸುತ್ತಾರೆ, ಮದುವೆಯ ಹೆಣ್ಣಿಗೆ ಕೆನ್ನೆ, ಕೈ ಮತ್ತು ಪಾದಗಳಿಗೆ ಮೆಹಂದಿಯಿಂದ ವಿಧ ವಿಧವಾದ ಚಿತ್ತಾರ ಬಿಡಿಸುತ್ತಾರೆ, ಕಿವಿಗೆ ಲೊಲಾಕು, ಬುಲಾಕು, ಕುತ್ತಿಗೆಗೆ ನೆಕ್ಲೇಸ್, ತೋಳುಬಂದಿ, ಕೈಉಂಗುರ, ಸೊಂಟದಪಟ್ಟಿ, ಜರಿಬಟ್ಟೆಯಲ್ಲಿ ಗುಂಗೂಟು ಹಾಕುತ್ತಾರೆ. ಮುಖದ ಮೇಲೆ ಆಕರ್ಷಕವಾಗಿ ಕಾಣುವುದಕ್ಕಾಗಿ ಮಿಂಚಿನ ಪುಡಿಯನ್ನು ಹಚ್ಚಿಕೊಳ್ಳುತ್ತಾರೆ. ಗಂಡ ಸತ್ತಾಗ ಶವದ ಮೇಲೆ ಬಿಳಿ ಬಟ್ಟೆಯನ್ನು ಹೊದಿಸುವ ರೂಢಿಯಿದೆ. ಮುಸ್ಲಿಂ ಗಂಡಸರು ಗಡ್ಡ ಬಿಡುವುದಕ್ಕೆ 'ಸುನ್ನತ್' ಎನ್ನುವರು. ಇವರಲ್ಲಿ ದೊಡ್ಡದಾಗಿ ಮೀಸೆ ಬಿಡುವಂತಿಲ್ಲ, ಹಿಂದೆ ಉದ್ದವಾಗಿ ಜುಟ್ಟುಬಿಡುವ ಹಾಗಿಲ್ಲ. ನಮಾಜ್ ಮಾಡುವ ಸಮಯದಲ್ಲಿ ತಲೆಗೆ ಟೋಪಿ ಅಥವಾ ಚೌಕವೊಂದನ್ನು ಹಾಕಿಕೊಂಡಿರಬೇಕು. ಪ್ರತಿ ಶುಕ್ರವಾರ ಮಸೀದಿಗೆ ತೆರಳಿ ಸಾಮೂಹಿಕ ಪ್ರಾರ್ಥನೆಯನ್ನು ಸಲ್ಲಿಸುತ್ತಾರೆ. ಇತ್ತೀಚಿನ ದಿನಗಳಲ್ಲಿ ರಾಜಾಸ್ಥಾನದ ಭಾಗಗಳಿಂದ ವ್ಯಾಪಾರ ವಹಿವಾಟಿಗೆ ಬಂದಿರುವ ಸೇಟುಗಳು, ಅವರದೇಆದ ರೀತಿಯ ವೇಷ ಭೂಷಣಗಳನ್ನು ತೊಡುತ್ತಾರೆ.

**ಊಟದ ವಿಧಾನಗಳು:**

ಮನುಷ್ಯನು ಶಕ್ತಿಗಾಗಿ ಹಾಗೂ ಜೀವಿಸುವುದಕ್ಕಾಗಿ ಆಹಾರವನ್ನು ಸೇವಿಸುವುದು ಅನಿವ್ಯಾರವಾಗಿದೆ. ಹೀಗಾಗಿ ಊಟ ತಯಾರಿಸುವುದು ಕೂಡಾ ಒಂದು ಕಲೆಯಾಗಿದೆ. ಮಾಡುವ ಕೈನ ಅಭಿರುಚಿಗೆ ತಕ್ಕ ಹಾಗೆ ಅಡುಗೆಯು ಸಿದ್ಧಗೊಳ್ಳುತ್ತದೆ. ಇದಕ್ಕೆ ಪ್ರಾದೇಶಿಕ ಭಿನ್ನತೆ ಜೊತೆ ಜೊತೆಗೆ ಭೌಗೋಳಿಕ ವಿಶಿಷ್ಟತೆಯು ಪ್ರಭಾವ ಬೀರುತ್ತದೆ. ಇವುಗಳ ಜೊತೆಗೆ ಅದರ ಆರ್ಥಿಕ ಸ್ಥಿತಿಗತಿ ಸಾಮಾಜಿಕ ಸ್ಥಾನಮಾನ, ಧಾರ್ಮಿಕ ರೀತಿ–ನೀತಿಗಳು ಸಹಾ ಪ್ರಭಾವ ಬೀರಿ, ಇವೆಲ್ಲವುಗಳ ದಟ್ಟ ಪ್ರಭಾವ ಜೊತೆಗೆ ಅಡುಗೆ–ಊಟೋಪಾಚಾರದ ಪದ್ದತಿಯು ನಿರ್ಣಯವಾಗುತ್ತದೆ. ಬೆಟ್ಟದಪುರದಲ್ಲಿ ಕೂಡಾ ವಿಭಿನ್ನವಾದ ಬಯಲುಸೀಮೆರೀತಿಯ ಊಟೋಪಾಚಾರವನ್ನು ಗುರ್ತಿಸಬಹುದು.

ಇಲ್ಲಿ ಸಾಮಾನ್ಯವಾಗಿ ರಾಗಿಮುದ್ದೆ, ರೊಟ್ಟಿ, ಸಾರು, ಪಲ್ಯ ಸೇವಿಸುತ್ತಾರೆ. ಈಗೀಗ ಉಪ್ಪಿಟ್ಟು, ದೋಸೆ, ಪೂರಿ, ಚಪಾತಿ ಇತ್ಯಾದಿಗಳನ್ನು ಸೇವಿಸುವರು. ಆಧುನಿಕತೆಯ ಪ್ರಭಾವ ವ್ಯಾಪಾರ–ವಹಿವಾಟುಗಳ ಪ್ರಭಾವದಿಂದಾಗಿ ಅಲ್ಲದೇ, ಸರ್ಕಾರಿ ನೌಕರರು ಹೆಚ್ಚಾಗಿ ನೆಲೆಸಿರುವುದರಿಂದ ಊಟೋಪಚಾರದಲ್ಲಿ ಅಗಾಧವಾದ ಬದಲಾವಣೆಗಳು ಕಂಡು ಬರುತ್ತಿವೆ, ಆದರೂ ಸಹಾ ಇಲ್ಲಿನ ರೈತರು ಸಾಮಾನ್ಯವಾಗಿ ಮಧ್ಯಾಹ್ನ ಮತ್ತು ರಾತ್ರಿವೇಳೆಗಳಲ್ಲಿ ರಾಗಿ ಮುದ್ದೆ, ಅನ್ನ, ಸಾರಿನ ಊಟವನ್ನು ಮಾಡುತ್ತಾರೆ. ಮುದ್ದೆ ಹಾಗೂ ರೊಟ್ಟಿಯನ್ನು ರಾಗಿ, ಜೋಳ, ಅಕ್ಕಿ ಮುಂತಾದವುಗಳಿಂದ ಮಾಡುತ್ತಾರೆ, ಇವುಗಳ ಪುಡಿಯನ್ನು ಹಸಿಹಿಟ್ಟು ಎಂದು, ತಿನ್ನಲೂ ತಯಾರಾದವುಗಳನ್ನು ಬಿಸಿಹಿಟ್ಟುಗಳೆಂದು ಕರೆಯುವರು. ಸಾಂಬಾರನ್ನು ಸಾರು, ಸಾಂಬಾರು,ಎಸರು, ಪಜ್ಜಿ ಎಂದು ಕರೆಯುತ್ತಾರೆ. ಸೊಪ್ಪಿನಸಾರು, ಬೇಳೆಸಾರು, ಹೊಂದೆಸರುಪಜ್ಜಿ, ಉಪ್ಪೆಸರು ಮುಂತಾದ ವಿವಿಧ ಸಾರುಗಳನ್ನು ತಯಾರಿಸುತ್ತಾರೆ. ಸಸ್ಯಾಹಾರಿಗಳು ಟೋಮ್ಯಾಟೋ, ಬದನೆ, ಬೆಂಡೆಕಾಯಿ, ಪಡವಲಕಾಯಿ, ಆಲೂಗೆಡ್ಡೆ, ಬಿಟ್‌ರೋಟ್, ಕ್ಯಾರೆಟ್, ಹೂಕೋಸು ಮುಂತಾದ ತರಕಾರಿಗಳನ್ನು ಬಳಸುತ್ತಾರೆ. ಮಾಂಸಾಹಾರಿಗಳು ಕೂಡಾ ಇವುಗಳನ್ನು ಸಾಮಾನ್ಯವಾಗಿ ಬಳಸುತ್ತಾರೆ. ಮಾಂಸಾಹಾರಿಗಳು ಕುರಿ, ಕೋಳಿ, ಆಡು, ಹಂದಿ, ಮೊಲ, ನಳ್ಳಿ, ಮೊಟ್ಟೆ ಮುಂತಾದ ಪ್ರಾಣಿಜನ್ಯ ಮಾಂಸಗಳಿಂದ ಮಾಂಸದ ಸಾರನ್ನು ಕೂಡಾ ತಯಾರಿಸುವರು ಇದರ ಜೊತೆಗೆ ಅಣಬೆ ಸಾರನ್ನು ಕೂಡಾ ಮಾಡುತ್ತಾರೆ. ಮಾಂಸವನ್ನು ಬಾಡು ಎಂದು ಕರೆಯುತ್ತಾರೆ. ಹಾಗಾಗಿ ಮಾಂಸದೂಟವನ್ನು ಬಾಡೂಟವೆಂದು ಸಹಾ ಕರೆಯುವರು. ಮಾಂಸದೂಟವನ್ನು ನೆಂಟರಿಷ್ಟರು ಒಂದಾಗ, ಹಬ್ಬಹರಿದಿನಗಳಂದು ಹೆಚ್ಚಾಗಿ ತಯಾರಿಸುತ್ತಾರೆ. ದೇವರಿಗೆ ಹರಕೆಯನ್ನು ತೀರಿಸುವ ಸಲುವಾಗಿ ಕೊಡುವ ಕುರಿ, ಕೋಳಿ, ಮುಂತಾದ ಪ್ರಾಣಿಗಳ ಬಲಿಯಿಂದಾಲೂ ಬಾಡೂಟ ಸಿದ್ಧಗೊಳಿಸುತ್ತಾರೆ, ಇತ್ತೀಚಿನ ದಿನಗಳಲ್ಲಿ ಬದಲಾದಂತಹ ಆರ್ಥಿಕ ಪರಿಸ್ಥಿತಿಗಳು ಬೇಕೆಂದಾಗ ಬಾಡೂಟ ತಯಾರಿಸಿಕೊಳ್ಳುವ ಅವಕಾಶವನ್ನು ಕಲ್ಪಿಸಿವೆ.

ಅಕ್ಕಿಯನ್ನು ಬಳಸಿ ತಯಾರಿಸುವ ಅನ್ನದಲ್ಲಿ ಚಿತ್ರಾನ್ನ, ಕಿಚಡಿಅನ್ನ, ಹುಳಿಅನ್ನ, ಮೊಸರನ್ನ, ಬೆಲ್ಲದಅನ್ನ, ವಗ್ಗರಣಿಅನ್ನ, ತುಪ್ಪದಅನ್ನ ಎಂಬ ಇತ್ಯಾದಿ ಬಗೆ ಬಗೆಯ ಅನ್ನ ತಯಾರುಮಾಡುತ್ತಾರೆ.ಬೆಳ್ಳಿಗೆ ಹಾಗೂ ಸಾಯಂಕಾಲಗಳಂದು ಸಾಮಾನ್ಯವಾಗಿ

ಕಾಫಿ, ಟೀ ಕುಡಿಯುವ ಪರಿಪಾಠವಿದೆ ಸಾಂಬಾರದಕಾಫಿ, ಮೆಣಸು, ಶುಂಠಿಗಳಲ್ಲಿ ಕಷಾಯ ಮಾಡಿ ಸೇವಿಸುವ ಪರಿಪಾಠವಿದೆ.ಇಲ್ಲಿನ ಜನರು ಹಾಲು, ಮೊಸರು, ಬೆಣ್ಣೆ, ತುಪ್ಪವನ್ನು ಸಮೃದ್ಧವಾಗಿ ಊಟೋಪಾಚಾರದಲ್ಲಿ ಬಳಸುತ್ತಾರೆ. ಹಿಂದೂಗಳು ಉಪವಾಸವನ್ನು ಕೆಲವು ನಿಗದಿತ ಕಾಲದಲ್ಲಿ ಮಾಡುವರು. ಮುಸ್ಲಿಂರು ಕೂಡಾ ರಂಜಾನ್ ತಿಂಗಳಲ್ಲಿ ಉಪವಾಸವನ್ನು ಮಾಡುತ್ತಾರೆ. ಬೆಟ್ಟದಪುರದ ಆಸುಪಾಸಿನ ಗ್ರಾಮಗಳಲ್ಲಿ ಹೇರಳವಾಗಿ ತೆಂಗಿನ ಎಳೆನೀರು, ಬಾಳೇಹಣ್ಣುಗಳನ್ನು ಬೆಳೆಯುವುದರಿಂದ ಇವುಗಳನ್ನು ಹೆಚ್ಚಾಗಿ ಬಳಸುವರು ದ್ರಾಕ್ಷಿ, ಸೇಬು, ಮೋಸಂಬಿ ಮುಂತಾದ ಹಣ್ಣುಗಳನ್ನು ಹೊರಭಾಗದಿಂದ ತರಿಸಿ ಮಾರುಕಟ್ಟೆಗಳಲ್ಲಿ ಕೊಂಡು ತಿನ್ನುವರು.

** ** **

# ಅಧ್ಯಾಯ – 3

## ಶಾಸನಗಳ ಸಮೀಕ್ಷೆ

ಗತಕಾಲದ ಘಟನೆಗಳ ಇತಿಹಾಸವನ್ನು ತಿಳಿಯಲು ಶಾಸನಗಳ ಮಹತ್ವ ಅಷ್ಟಿಷ್ಟಲ್ಲ, ಶಾಸನಗಳು ಗತಿಸಿದ ವಿಷಯಗಳನ್ನು ತಿಳಿಸಿದರೂ, ಇತಿಹಾಸವನ್ನು ತಿಳಿಯಲು ಇವುಗಳನ್ನು ಬಿಟ್ಟು ಬೇರೆ ಮಾರ್ಗವೇ ಇಲ್ಲ ಎನ್ನಬಹುದು. ಶಾಸನಗಳು ಅರಸರ ಬಗ್ಗೆ ಅವರ ಸಾಮ್ರಾಜ್ಯದ ಬಗ್ಗೆಯೇ ಮಾತ್ರ ರಚೆನೆಗೊಂಡಿಲ್ಲ. ದಾನದತ್ತಿಗಳ ವಿಚಾರಗಳನ್ನು ಕೂಡಾ ಹೆಚ್ಚು ತಿಳಿಸುತ್ತವೆ, ಪಿರಿಯಾಪಟ್ಟಣ ತಾಲೂಕಿನಲ್ಲಿ ಹೆಚ್ಚು ಶಾಸನಗಳು ಬೆಟ್ಟದಪುರದಲ್ಲಿ ದೊರಕಿವೆ, ಇಲ್ಲಿ 41 ಶಾಸನಗಳು ಸದ್ಯದಲ್ಲಿ ದೊರಕಿವೆ. ಬಹುಪಾಲು ಶಾಸನಗಳು ಮಲ್ಲಿಕಾರ್ಜುನಸ್ವಾಮಿಯ ಸೇವಾರ್ಥ ಬಿಟ್ಟು ಕೊಟ್ಟ ದಾನ-ದತ್ತಿಯ ವಿವರಗಳನ್ನು ತಿಳಿಸುತ್ತವೆ. ಹೆಚ್ಚಿನ ಶಾಸನಗಳು ಜೈನ ಶಾಸನಗಳು ಇವುಗಳಲ್ಲಿ ತೀರ ಪ್ರಾಚೀನವಾದದ್ದು, ಮಲ್ಲಿನಾಥಪುರದ ಕ್ರಿ.ಶ. 1398ರ ಶಾಸನವಾಗಿದೆ.

ಶಾಸನ ಸಂಖ್ಯೆ 60(iv ಹು 37):– ಬೆಟ್ಟದಪುರದ ಕೋಟೆಯ ಈಶಾನ್ಯ ದಿಕ್ಕಿಗೆ ನೆಟ್ಟಿರುವ ಕಲ್ಲಿನ ಮೇಲಿದ್ದು 'ಒಡೆಯ' ಎಂಬುವವನು ಮಲ್ಲಯ್ಯನ ಸೇವೆಗೆಂದು ಇದ್ದ 'ಸಿಂಗರಣದ ತೋಟ' ಒಣಗದ ರೀತಿ ಕೆರೆಯೊಂದನ್ನು ಕಟ್ಟಿಸಿದ ವಿಚಾರವಿದೆ.

ಶಾಸನ ಸಂಖ್ಯೆ 59 (iv ಹು 36):–ಇದು ವಿಜಯನಗರ ಕಾಲಕ್ಕೆ ಸೇರಿದಾಗಿದೆ. ವಿಜಯನಗರದ ತಿರುಮಲ ರಾಜಯ್ಯನು ಪಿರಿಯಾಟ್ಟಣದ ರುದ್ರಗಂನೆಂಬ ಚೆಂಗಾಳ್ವ ಅರಸನಿಗೆ 'ಮಳಲವಾಡಿ' ಸೀಮೆಯನ್ನು ಅನ್ನದಾನಿ ಮಲ್ಲಿಕಾರ್ಜುನ ಸೇವೆಗೆಂದು ದತ್ತಿನೀಡಿದ ಪ್ರಸ್ತಾಪವಿದೆ.

ಶಾಸನ ಸಂಖ್ಯೆ 62 (iv ಹು 36):–ಇದು ಕ್ರಿ.ಶ. 1590 ರ ಚಂಗಾಳ್ವ ಕಾಲದ ಶಾಸನ.ಚಂಗಾಳ್ವದ ಅರಸು ಶ್ರೀಕಂಠಯ್ಯ ಮಗ ಪಿರಿಯಾರಾಜಯ್ಯದೇವ ಎಂಬುವವನ್ನು ತಂದೆ-ತಾಯಿ, ವೀರರಾಜ ಒಡೆಯ ಹಾಗೂ ಚಂಗಾಳ್ವ ವಂಶದವರೆಲ್ಲರಿಗೂ ಕೈಲಾಸವಾಗದೆಂದು ಕಂಚಿನ ಗಂಟೆಯನ್ನು ಮಾಡಿಸಿಕೊಟ್ಟಿದ್ದಕ್ಕೆ ಸಂಬಂಧಿಸಿದ್ದು, ಮಲ್ಲಿಕಾರ್ಜುನಸ್ವಾಮಿಯ ಉತ್ಸವ ವಿಗ್ರಹದ ಗುಡಿಯೊಳಗಿನ ಕಂಚಿನ ಗಂಟೆಯಲ್ಲಿ ಕೆತ್ತಲ್ಪಟ್ಟಿದೆ.

ಶಾಸನ ಸಂಖ್ಯೆ (xiv ಹು 45):– ಕ್ರಿ.ಶ 1867 ದೇವಸ್ಥಾನದ ವೃಷಭವಾಹನದ ಮೇಲೆ ಕೆತ್ತಲಾಗಿರುವ ಶಾಸನ. ಕೃಷ್ಣರಾಜ ಒಡೆಯರ ಕಾಲದಲ್ಲಿ ಹಜೂರು ಮೋದಿಖಾನೆ ಸಾಹುಕಾರನೊಬ್ಬ ಬೆಟ್ಟದಪುರದಲ್ಲಿದ ಅವನ ಮೇಗಳಮನೆ ಲಿಂಗಣ್ಣನ ಮಗ ನಾಗಶೆಟ್ಟಿ ಎಂಬುವವನು, ಆತನು ಹಿತ್ತಾಳೆಯ ವೃಷಭ ವಾಹನ ಮಾಡಿಸಿಕೊಟ್ಟ ಬಗ್ಗೆ ಮಾಹಿತಿಯಿದೆ.

ಶಾಸನ ಸಂಖ್ಯೆ 7 :– ವೀರರಾಮಯ್ಯದೇವಯ್ಯ ಮಕ್ಕಳಾದ ಲಕ್ಕಿದೇವಯ್ಯ, ರಾಮಯ್ಯದೇವಯ್ಯ ಎಂಬುವರು ಹರಿಯಪುರ, ಬೆಟ್ಟದಪುರ, ಮಲ್ಲಿನಾಥಪುರ, ಮಲ್ಲಪುರ, ಹರದೂರುಪುರ ಊರುಗಳನ್ನು ಅನ್ನದಾನಿ ಮಲ್ಲಿಕಾರ್ಜುನನಿಗೆ ದತ್ತಿಬಿಟ್ಟು ಕೊಟ್ಟ ಪ್ರಸ್ತಾಪವಿದ್ದು, ಇವರು ಪಾಳೆಯಗಾರರಾಗಿದ್ದರು.

ಶಾಸನ ಸಂಖ್ಯೆ(iv ಹು 40):– ಮಟಗೈನೂರು ದಾಸರಿನಾಯ್ಕ ಎಂಬುವವನು ಅರಕಲಗೂಡು ಸೀಮೆಯನ್ನು ಸಿರಂಗಾಲದವರೆಗಿನ ವ್ಯಾಪ್ತಿಯನ್ನು ಅನ್ನದಾನಿ ಮಲ್ಲಿಕಾರ್ಜುನ ಸೇವೆ ಮಾಡುವುದಕ್ಕೆ ಭೂಮಿ ಬಿಟ್ಟುಕೊಟ್ಟ ಬಗೆ ತಿಳಿಸುತ್ತದೆ. ಇದು 19ನೇ ಶತಮಾನದ ಶಾಸನವಾಗಿದೆ.

ಶಾಸನ ಸಂಖ್ಯೆ71 (iv ಹು 41)–ಚೆಂಗಾಳ್ವ ರ ಶಾಸನವಾಗಿದ್ದು ಬೆಟ್ಟದ ಮೇಲೆ 2ನೇ ಕಲ್ಲಿನಲ್ಲಿ ಕೆತ್ತಲಾಗಿದೆ. ಕ್ರಿ.ಶ. 1586 ಎಂದು ತಿಳಿದು ಬಂದಿದೆ. ಶ್ರೀಕಂಠರಾಜದೇವನ ಮಗಪಿರಿಯರಾಜದೇವ ತನ್ನ ತಂದೆ ಶ್ರೀಕಂಠರಾಜಯ್ಯದೇವನಿಗೂ ತಾಯಿ ವಲ್ಲಭಮ್ಮನಿಗೂ ಒಳ್ಳೆಯದಾಗಲೆಂದು ಮಲ್ಲಿಕಾರ್ಜುನ ದೇವರ ಅಂಗರಂಗ ಭೋಗಕ್ಕೆ ನಂಜರಾಜ ಪಟ್ಟಣ ಸೀಮೆಯ 12 ಗ್ರಾಮಗಳಲ್ಲಿ, ರಾವಂದೂರು ಸೀಮೆಯ 9 ಗ್ರಾಮಗಳು, ಹನಸೀಗೆ ಸೀಮೆಯ 13 ಗ್ರಾಮಗಳು ಇವುಗಳು ದತ್ತಿಬಿಟ್ಟುಕೊಟ್ಟ ವಿಚಾರವಿದೆ.

**ಉಳಿದ ಶಾಸನಗಳ ಪಟ್ಟಿಯನ್ನು ಕೆಳಕಂಡ ರೀತಿ ಕೊಡಬಹುದು :**

1. ಶಾಸನ ಸಂಖ್ಯೆ 61 (xiv ಹು 38)

   ತೆಪ್ಪದ ಕೊಳದ ಬಳಿ ಬದ್ದಿರುವ ಕಂಬದಲ್ಲಿ

2. ಶಾಸನ ಸಂಖ್ಯೆ 64 (xiv ಹು 146)

   ಹಿತ್ತಾಳೆ ನವಿಲು ವಾಹನದ ಮೇಲೆ.

3. ಶಾಸನ ಸಂಖ್ಯೆ 65 (xiv ಹು 147)

ದೇವರ ಗುಡಿಯಲ್ಲಿನ ದೇವರ ಹಿತ್ತಾಳೆ ಪ್ರಭಾವಳಿಯಲ್ಲಿ

4. ಶಾಸನ ಸಂಖ್ಯೆ 66 (xiv ಹು 148)

ಹೊಲದಲ್ಲಿ ನೆಟ್ಟಕಲ್ಲು

5. ಶಾಸನ ಸಂಖ್ಯೆ 68 (ರಿ.1924–115)

ಮಾರಿ ದೇವಾಲಯದಲ್ಲಿ 2ನೇ ಕಲ್ಲಿನಲ್ಲಿ

6. ಶಾಸನ ಸಂಖ್ಯೆ 69 ಸರ್ಕಾರಿ ಶಾಲೆಯ ಆವರಣದಲ್ಲಿ

**ಸಿಡ್ಲು ಮಲ್ಲಿಕಾರ್ಜುನ ಬೆಟ್ಟದಲ್ಲಿರುವ ಶಾಸನಗಳು**

7. ಶಾಸನ ಸಂಖ್ಯೆ 72 ಬೆಟ್ಟದ ಮೇಲಿನ ದೇವಸ್ಥಾನದಲ್ಲಿ ನೆಟ್ಟಿರುವ ಕಲ್ಲು.

8. ಶಾಸನ ಸಂಖ್ಯೆ 73 ಮೆಟ್ಟಿಲುಗಳ ಮೇಲಿನ ಕೆತ್ತನೆ.

9. ಶಾಸನ ಸಂಖ್ಯೆ 74 ಬೆಟ್ಟದ ಮೇಲಿನ ದೇವಸ್ಥಾನದ ಪೂರ್ವಗೋಡೆಗೆ ನೆಟ್ಟಿರುವ ಕಲ್ಲು.

10. ನವರಂಗದಲ್ಲಿರುವ ದಕ್ಷಿಣಾ ಮೂರ್ತಿ ವಿಗ್ರಹದ ಪೀಠದ ಮೇಲೆ.

11. ಶಾಸನ ಸಂಖ್ಯೆ 76 ಅದೇ ದೇವಸ್ಥಾನದ ಉತ್ತರಕ್ಕೆ ಇರುವ ನಂದಿಕಂಬದ ಬುಡದಲ್ಲಿ ಹಾಸು ಬಂಡೆಯ ಮೇಲೆ.

12. ಶಾಸನ ಸಂಖ್ಯೆ 77 (xiv ಹು 152)

13. ಶಾಸನ ಸಂಖ್ಯೆ 78 (xiv ಹು 153)

14. ಶಾಸನ ಸಂಖ್ಯೆ 79 (xiv ಹು 154)

15. ಶಾಸನ ಸಂಖ್ಯೆ 80 ಮತ್ತು 81

16. ಶಾಸನ ಸಂಖ್ಯೆ 82 (iv ಹು 43)

17. ಶಾಸನ ಸಂಖ್ಯೆ 83 (iv ಹು 44)

18. ಶಾಸನ ಸಂಖ್ಯೆ 84 (iv ಹು 149)

19. ಶಾಸನ ಸಂಖ್ಯೆ 85 (iv ಹು 149)

20. ಶಾಸನ ಸಂಖ್ಯೆ 86 (iv ಹು 150)

21. ಶಾಸನ ಸಂಖ್ಯೆ 87 (iv ಹು 151)

ಹೀಗೆ ಬೆಟ್ಟದಪುರಕ್ಕೆ ಸಂಬಂಧಿಸಿದಂತೆ ಶಾಸನಗಳ ಸಂಖ್ಯೆಯ ಏರುತ್ತಲೇ ಹೋಗುತ್ತಿದೆ. ಬೆಟ್ಟದಪುರಕ್ಕೆ ಸಂಬಂಧಿಸಿದ ಎಫಿಗ್ರಾಫಿಯಾ ಕರ್ನಾಟಕ ಸಂಪುಟ ನಾಲ್ಕು(ಮೈಸೂರು ಜಿಲ್ಲೆ), ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವ ವಿದ್ಯಾನಿಲಯ, ಮೈಸೂರು. 1975 ಪುಟ 528–550. ದ ಶಾಸನಗಳ ಪೂರ್ಣ ವಿವರಗಳನ್ನು ಕೆಳಕಂಡತೆ ನೋಡಬಹುದು.

**ಪಿರಿಯಾಪಟ್ಟಣ 59 ( IV ಹು 36)**

**ಬೆಟ್ಟದಪುರ**

**ಬೆಟ್ಟದಪುರ ಮನೆಯೊಂದರ ಹಿತ್ತಲಲ್ಲಿರುವ ಕಲ್ಲು**

This is a stone charter issued by the Vijayanagara King Tirumalarajayadeva maha arasu to the Changalva chief Rudragana stating that he granted Malalavadi-sime for offerings etc., to god Annandani Mallikarjuna so that merit might accrue to his parents Ramarajaya and Timmajamma. It also remitted the tribute (pagadi) due from Rudragana *allias* Piriyaraja, son of Srikantharaja, who was the son of Nanjundaraja. The god Selvaopillai of Melukote and the alvars are cited as withnesses to the grant.

The record is dated saka 1529, Plavanga, Vaisakha su. 3 crresponding to 1607 A.D, April 19.

1. ಶುಭಮಸ್ತು ನಮಸ್ತುಂಗಶಿರಶ್ಚುಂಬಿಚಂದ್ರಚಾ
2. ಮರಚಾರವೇ/ತ್ರೈಲೋಕ್ಯನಗರಾಂಭಾಮೂಲಸ್ತಂಭಾಯ ಶಂಭವೇ!
3. ಶ್ರೀ ಶುಭಮಸ್ತು ಶುಸಿ ಶ್ರೀವಿಜೆಯಾದೆಸಿಯ ಸಾಲಿವಾಹನಸಕವರುಶ

4. ೧೫೭೯ ಸಂದ ಪ್ಲವಂಗಸಂವತ್ಸರದ ವೈಶಾಖ ಶು ೩ಲು ಶ್ರೀಮಂಡಲೇಶ್ವರಾ ರಾ

5. ಮರಾಜಯನವರ ತಿರುಮಲರಾಜಯದೇವ ಮಹರಸುಗಳವರು ನಂಜರಾ

6. ಯಪಣದ ರುದ್ರಗಣಂಗಳಿಗೆ ಕೊಟ ಶಿಲಾಶಾಸನದ ಕ್ರಮವೆಂತೆಂದೆಡೆ ತಿ

7. ರಮಲರಾಯರ ಸುತರಾದ ಸೋಮರಾಜಯನವರು ರಾಮರಾಜಯನವರ ಸುತರಾದ

8. ತಿರುಮಲರಾಜಯನವರು ರಾಮರಾಜಯನವರಿಗೂ ತಿಂಮಾಜಂಮನವರಿಗೂ ಪುಂ

9. ಣ್ಯವಾಗಲಿಯೆಂದು ಮಳಲವಾಡಿಯ ಸೀಮೆನು ಆಂನದಾನಿ ಮಲ್ಲಿಕಾರ್ಜುನಸ್ವಾ

10. ಮಿಯ ಅಂಗರಂಗವೈಭವದ ಭೋಗಪಡಿಗೆ ಚಂಗಾಳ್ವನ ವೊಂಶದ ನಂಜರಾಯಪ

11. ಟ್ಟಣದ ಅರಸುಗಳುವುಂಟಾದ ಪರಿಯಂತರ ಉ ಭೂಮಿಯು ಆಕಾಶವುಂಟಾ

12. ದಪರಿಯಂತರ ಉ ತಪಲಿಲ್ಲವೆಂದು ಶಿಲಾಶಾಸನವನು ನೆಟಕೊಟೆವು ಕಾಶಿ ಕೇತಾರಾ

13. ನೀಲಕಂಠ ಲೇಪಾಳ ತುಂಗಭದ್ರೆ ವಾರಣಾಸಿ ಅಳ್ವಿಕೆಯಾಗಿ ಅಕ್ಷತದಿಗೆಯ

14. ರಾಮನಾಥಪುರದ ತೀರ್ಥದಲ್ಲಿ ಶ್ರೀ ಸೈಲಪರ್ರುವತದ ಮಲ್ಲಿಕಾರ್ಜುನಸ್ವಾಮಿ ಆ

15. ಳ್ವಿಕೆಯಾಗಿ ತಿರುಪತಿಯ ತಿರುವೆಂಗಳನಾಥಸ್ವಾಮಿ ಅಳ್ವಿಕೆಯಾಗಿ ಕಪ್ಪಿನೀ

16. ಪತಿ ನಂಜುಂಡೇಸರ ಅಳ್ವಿಕೆಯಾಗಿ ಶ್ರೀರಂಗಪಟ್ಟಣದ ರಂಗನಾಥಸಾಮಿಯ

17. ಳ್ವಿಕೆಯಾಗಿ ಕೈಲಾಸ ವೈಕುಂಠವಳ್ವಿಕೆಯಾಗಿ ಆಂನದಾನಿ ಮಲ್ಲಿಕಾರ್ಜುನಸ್ವಾಮಿ

18. ಯ ರಥೋತ್ಸಹದ ಮಧ್ಯದಲ್ಲಿ ಶಿಲಾಶಾಸನವನು ನೆಟುಕೊಟೆವು ತಂದೆಲಿ ಹತ್ತು ತಾಯ

19. ಲಿ ಹಂನೊಂದು ಯಿಪ್ಪತ್ತೊಂದು ಮಾತಾಪಿತ್ರುಗಳಿಗೂ ಪುಣ್ಯವಾಗಲಿ

20. ಯೆಂದು ಮಳಲವಾಡಿಸೀಮೆನು ಆಂನದಾನಿ ಮಲ್ಲಿಕಾರ್ಜುನಸ್ವಾಮಿಯ ಅಂ
21. ಗರಂಗವೈಭವದ ಭೋಗಪಡಿಗೆ ಶಾಸ(ನ) ವ ನೆಟುಕೊಟೆವು ಶ್ರೀರಂಗಪಟ್ಟಣ
22. ಕೆ ರುದ್ರಗಣಂಗಳಿಗೂ ಕೊಟು ಬರುವ ಪಗು (ದಿ) ರೊಕ್ಕವನು ಚಂಗಾಳ್ವನ ವೊಂಶ
23. ದ ನಂಜರಾಯಪಟಣದ ಅರಸುಗಳು ಉಂಟಾದಪರಿಯಂತರ ಉಯೀ
24. ಭೂಮಿಯು ಯೀ ಆಕಾಶ ಉಂಟಾದ ಪರಿಯಂತರಉ ತಪ್ಪಲಿಲ್ಲವೆಂದು ಪಗು
25. ದಿ ರೊಕವನು ಬಿಟುಕೊಟೆಉ ನಂಜುಂಡರಾಜಗಳ ಕೊಮಾರರಾದ ಶ್ರೀಕಂ
26. ಠರಾಜುಗಳು ಶ್ರೀಕಂಠರಾಜಗ(ಳ) ಕೊಮಾರರಾದ ರುದ್ರಗಣಂಗಳ ಕಾ
27. ಲದಲ್ಲಿ ಆದಂಥಾ ಶಿಲಾಶಾಸನ ಮಳಲವಾಡಿ ಸೀಮೆಯು ನಂಜರಾ
28. ಯಪಟಣದ ರಾಜ್ಯದ ವೊಳಗಾಗಿ ಮಲ್ಲಿಕಾರ್ಜುನಸ್ವಾಮಿಯ
29. ಪುರವಾರ್ಗವ ಕೂಡಿದು ರುದ್ರಗಣಂಗಳ ಮೊದಲ ಹೆಸರು ಪಿರಿಯ
30. ರಾಜನು ಚಂಗಾಳ್ವನ ವೊಂಶವನು ಕೂಡಿ ನಂಜರಾಯಪಟಣ
31. ದ ರಾಜ್ಯಕ್ಕೆ ಆಧಿಪತಿತನಕೆ ಸಲುವನು ನಾಉ ಕೊಟಂಥಾ ಮಳ
32. ಲವಾಡಿಸೀಮೆಯ ಪಿರಿಯರಾಜನ ಕೂಡಿದು ಬಿಟಂಥಾ ಪ
33. ಗುದಿರೊಕಉ ಪಿರಿಯರಾಜನಿಗೆ ಬಿಟು ಕೊಟುದು ಮುಂದೆ ಶ್ರೀ
34. ರಂಗಪಟಣಕೆ ಬಂದು ನಿಂದಂಥಾ ದೊರೆಯಾಗಲಿ ಮಂನೆಯ
35. ರಾಗಲಿ ಪಾರುಪತ್ಯಗಾನಾಗಲಿ ಪ್ರಭುಪಾಳಿಗಾರನಾಗಲಿ ಯೀ
36. ಅಪಣೆಗೆ ತಪ್ಪಿದವ ತಂನ ಹೆತ್ತತಾಯ ತಾನೆ ತಕಿಸಿಕೊಂಡುಹೋದ
37. ಹಾಗೆ ತಂನವಹ ಮಾನವನು ಅನಾಮಿಕರಿಗೆ ಕೊಟ್ಟ ಹಾಗೆ ತಂಮ
38. ಯಿಪ್ಪತ್ತೊಂದು ಮಾತಾಪಿತ್ರುಗಳಿಗೂ ಗತಿಗೋತ್ರವಿಲ್ಲದೆ ಕರ್ಮದಲ್ಲಿ ಮು
39. ಳುಗಿ ಯಿರುವನು ಯಿದಕೆ ತಪ್ಪದ ಯೆಂದು ಲಕ್ಷದ. ೦ಭತ್ತುರು
40. ಸಾಪಿರ ಜಂಗಮದೇವರ ಮುಂದೆ ಕೊಟಂಥಾ ಶಿಲಾಶಾಸನ ಮಳಲವಾ

41. ಡಿಸೀಮೆಯ ನಂಜರಾಯಪಟಣದ ರಾಜ್ಯದ ಪಗುದಿರೊಕವನು ರಾಮರಾ

42. ಜಯನವರ ಸುತರಾದ ತಿರುಮಲರಾಜಯನವರ ಕೈಯ್ಯ ಶ್ರೀಕಂಠರಾ

43. ಜಗಳ ಸುತರಾದ ರುದ್ರಗಣಂಗಳವರು ಪಡದಂಥಾ ಶಿಲಾಶಾಸನಕೆ ಮಂ

44. ಗಲಮಹಾ ಶ್ರೀ ಶ್ರೀ ಶ್ರೀ ॥ ಯೀ ವಖಣಿನು ಮೇಲುಕೋಟೆಯ

45. ಶಿಲಪಿಳಿರಾಯ ಸಾಕ್ಷಿಯಾಗಿ ಹಂನೆರಡು ಆಳ್ವಾರು ಸಾಕ್ಷಿಯಾ

46. ಗಿ ಕೊಟಂಥಾ ಶಿಲಾಶಾಸನ

**ಪಿರಿಯಾಪಟ್ಟಣ 60 (IV ಹು 37)**

**ಬೆಟ್ಟದಪುರ**

**ಕೋಟೆಯ ಈಶಾನ್ಯ ದಿಕ್ಕಿನಲ್ಲಿ ನೆಟ್ಟ ಕಲ್ಲಿನಲ್ಲಿ**

This record, Which is slightly damaged at the beginning, states that some *Odeya* (name lost) having built a tank, at a cost of 20 *gadyanas,* below the garden named *singara-tota,* so that the garden whould not wither, purchased four *Kbandugas* of wet land beyord that garden from the *sihanikas* of good Mallikarjuna of Kudukur and granted it for running an *aravatige* (water shed).

The extant portion of the date mentions only the cyclic year Isvara. The record is in characters of the 16$^{th}$ century.

1. ಯೀಸುರ ಸಂವತ್ಸರದ .......... ಲು

2. ಪ್ರಿತುವೀ ಮೂಲಸ್ತಾನದಕ್ಷಿ .......... ಕುಡುಕು

3. ರ ಮಲ್ಲಿಕಾರ್ಜುನದೇವರಿಗೆ .......... ಒಡೆಯರು

4. ಮಾಡಿದಂತ ದರ್ಮ ಚಿಕ್ಕಪುರದ ಸಿಂಗರದ ತೋಟದ

5. ಕೆರೆಗೆ ಯಿಪ್ಪತು ಗ 20 ಹೊಂನನಿಕಿ ಆ ಸಿಂಗರ

6. ದ ತೋಟ ಒಣಗದ ಹಾಗೆ ಕೆರೆಯ ಕಟಿಸಿದೆನಾಗಿ ಸಿಂ

7. ಗರದ ತೋಟದ ಕೆಳಗೆ ಕಂತೆಮಲಿನಾತನ ಹೊಲದಿಂ ಮೂಡ ಸ

8. ತಮಮಲವ ಹೊಲದಿಂ ಪಡುವ ಆಪುಗೊಂಡನಹಳಿ ಕೆರೆಯ ತೆಂಕ ಯಿಂತೀ

9. ಚತುಸೀಮೆ ಒಳಗುಳ ನಾಗಂಡುಗ ಗದ್ದೆಯನು ಮಲ್ಲಿಕಾರ್ಜುನದೇವರ ಮನೆ ಸ್ತನಿಕರ

10. ಆಂಕಪ್ಪ ಕವನಮಲ್ಲಪ್ಪ ದೇವಂಣ್ನ ಚೆನನ್ಮಲ್ಲಪ್ಪ ಕಲ್ಲಪ್ಪ ಯಿಂತಿವರ ಕಯಿ

11. ಯಲಿ ನಾಗುಂಡುಗ ಗದೆಯ ಕರೆಯವಾಗಿ ಕೊಂಡೆನಗಿ ಹರುವಿತಿಯಸ್ತಳ ಹೊಳದಲಿ

12. ಅರವಟಿಗೆನು ನರ ಹೊಂನನಿಕ್ಕಿ ಕಟ್ಟಿಸಿದೆನಗಿ ಆಕವಿಳಸದವರಿಗೆ ನಾಗಂಡುಗ ಗ

13. ದೆಯನು ಆರವಟಿಗೆಯ ನೀರನೆರೆ ಹೇಳಿ ಧಾರೆನೆರೆದು ಕೊಟೆನು ಯೀ ಧರ್ಮವನು ಧರೆ

14. ಉ ಛಂದ್ರನುಳನಕ ಯೀ ಧರ್ಮವನು ಗುರುದೇವಗಳು ನಡಯಿಸ್ವರು ಯೀ ಧರ್ಮಕೆ ತಪಿದ

15. ರು ಗಂಗೆಯ ತಡಿಯ ಕವಿಲಿಯ ಕೊಂದ ತಿಂದ ಪಾಪ(ದ)ಲಿ ಹೋಹರು ಹುಳು ಕುಂಬಿಯಲಿ

ಹಿಂಭಾಗ

16. ಬೀಳು ಯಿ ಧಂರ್ಮಕ್ಕೆ ಸಕ್ಷಿ ಕಿತುರ ಕೇತಂಣ ಚಿಲು

17. ಕುಂದದ ದೇವಪ ತುಂಗದ ಆದಿಅಪ ಬಳಗೊಡಲ

18. ಸೋವಪ ಚಪರದಹಳಿಯ ಸೋಯಗೊಂಡನೊಳ

19. ಗದ ಗವಡುಪ್ರಜೆಗಳು ಯಿಂತೀ ಸಕ್ಷಿಗಳ ಒಪ ಕು

20. ಡುಕುರ ಮಲ್ಲಿಕಾರ್ಜುನದೇವರು ಮಹಾ ಶ್ರೀ ಶ್ರೀ

## ಪಿರಿಯಾಪಟ್ಟಣ 61 (IV ಹು 38)

### ಬೆಟ್ಟದಪುರ

### ತೆಪ್ಪಗೊಳದ ಬಳಿ ಬಿದ್ದಿರುವ ಕಂಬದಲ್ಲಿ

This epigraph states that the well was constructed by Nanjappayya, son of *Senabova* Devappayya, of Bettadapura. It is dated the year Sadharana, Karttika su. 5, Which is not sufficient for verification. The record. Is in characters of c. 17th century.

1. ಶ್ರೀ
2. ಸಾಧಾರಣಸಂವತ್ಸ
3. ರದ ಕಾರ್ತಿಕ ಸುಧ 5
4. ಲು ಬೆಟ್ಟದಪುರ
5. ಸೇನೆಬೋವ ದೇವಪ್ಪ
6. ಯ್ಯನವರ ಮಕ್ಕಳು
7. ನಂಜಪ್ಪಯ್ಯನ
8. ವರು ಕಟ್ಟಿಸಿದ ಭಾವಿ

## ಪಿರಿಯಾಪಟ್ಟಣ 62 (IV ಹು 39)

### ಬೆಟ್ಟದಪುರ

### ಮಲ್ಲಿಕಾರ್ಜುನಸ್ವಾಮಿಯ ಉತ್ಸವ ವಿಗ್ರಹದ ಗುಡಿಯೊಳಗಿನ ಕಂಚಿನ ಘಂಟೆಯ ಮೇಲೆ

This incseription, engraved on a bell in the mallikarjuna temple, recored that the bell was donated to god annadani mallikarjuna by the changalva chief, priyajayadeva, for the merit of the parents srikantharajayya and vallabhajamma,as also for the welfare of himself

and all the members of his family.The bell contains three figures carved with names srikantharaju piriyaraju and vallabhajamma below.

If dated saka 1511, vikriti, Ashadha su, 7, Monday, Corresponding to 1590 A.D., June 29. Vikriti, however, fell on saka 1512.

1. ಶುಭಮಸ್ತು । ಶಾಲಿವಾಹನಶಕ 1511 ಸಂದ ।ವಿಕ್ರುತುಸ/ಮವತ್ಸರದ ಆಷಾಢ ಶು 7 ಸೋಮವಾರ। ಶ್ರೀಮನ್ಮಹಾದೇವದೇವೋ
2. ತ್ತಮ ಅಂನದಾನಿ ಮಲ್ಲಿಕಾರ್ಜುನದೇವರಿಗೆ। ನಂಜರಾಯಪಟ್ಟಣದ ಸೋಮವಂಶದ ರುಕುಶಾಕೆಯ ಹರಿಗೋತ್ರದ । ಶ್ರೀಕಂ
3. ಠರಾಜಯನವರ ಕುಮಾರರು ಪಿರಿಯರಾಜಯದೇವಮಹಾಅರಸುಗಳು ಕೊಟ್ಟ ಗಂಠೆಯ ಶಾಸನದ ವಿವರ । ಜಂಗಮದ ಪ್ರಸಾದ
4. ಲಿಂಗಕೆ ಸಲುವುದುಷ। ನಂಮ ತಂದೆ ಶ್ರೀಕಂಠರಾಜಯಗು । ನಂಮ ಅಂಮ ವಲ್ಲಭಾಜಂನವರಿಗು ವ। ಪಿರಿಯರಾಜವೊಡೆಯರಿಗು ಕೈಲಾಸ
5. ಚಂವಾಳ್ವಯೆಂದು । ವೀರರಾಜವಡೇರಿಗು ಕೈಲಾಸವಾಗಲಿಯೆಂದು । ಚಂಗಾಳ್ವವಂಶದವರೆಲ್ಲಾ ಕೈಲಾಸಕೈದಿದರೆಂದು ಕೊಟ ಗಂಠೆಯ ಶಾಸನ ಶ್ರೀಕಂಠರಾಜ । ಪಿರಿಯರಾಜು । ವಲ್ಲಭಾಜಂಮ।.

**ಪಿರಿಯಾಪಟ್ಟಣ 63 (XIV ಹು 145)**

**ಬೆಟ್ಟದಪುರ**

**ಅದೇ ಗುಡಿಯಲ್ಲಿರುವ ಹಿತ್ತಾಳೆ ವೃಷಭವಾಹನದ ಮೇಲೆ**

The incseription,states that the brass bull-vehicle was the gift of Naga-setti, son of Megala mane linganna of Bettadapura,to god Sidlu-mallikarjuna of that place. Naga-seti was a royal merchant(bajuru-modikbane savakara) of king krishanraja vodeya of mysore.

The given details of date viz., saka 1789, Prabhava Asvija ba. 5, Friday, regularly correspond to 1867 A.D., October 18.

1. ಶಾಲಿವಾಹನಶಕ ವರ್ಷಂಗಳು 1789ನೇ ಸಂದ ವರ್ತಮಾನವಾದ ಪ್ರಭವಸಂವತ್ಸರದ ಆಶ್ವಿಜ ಬಹುಳ
2. 5ಸುಕ್ರವಾರದಲ್ಲು ಸಕಲಸುವರ ವರಮಕುಟಮಣಿಗಣಕಿರಣನೀರಾಜೀವಯುಗಳರಾದ ಬೆ
3. ಟ್ಟದಪುರ ಶಿದ್ಲುಮಲ್ಲಿಕಾರ್ಜುನ ಸ್ವಾಮಿಯರ ಸಂನಿಧಿಗೆ ॥ ಶ್ರೀಮದ್ರಾಜಾಧಿರಾಜ ಮಹಾರಾಜ ಚಕ್ರವರ್ತಿಮಂ
4. ಡಲಾನುಭೂತ ದಿವ್ಯರತ್ನಸಿಂಹಾಸನಾರೂಢರಾದ ಶ್ರೀಮನ್ಮಹಿಶೂರಪುರವಧೀಶ ಶ್ರೀಕ್ಷರಾಜವಡೆಯರ
5. ವರ ಪಾದಸೇವಕನಾದ ಹಜೂರುಮೋದೀಖಾನೆ ಸಾವಕಾರ ಬೆಟ್ಟದಪುರದ ಮೇಗಳಮನೆ ಲಿಂಗಣ್ಣ ಮಗ ನಗಶಟ
6. ಯು ಮಾಡಿ ವಪಿಶಿದ ಹಿತ್ತಾಳೆ ವೃಷಭವಾಹನ ಶೇವಾರ್ಥ ॥

### ಪಿರಿಯಾಪಟ್ಟಣ 64 (XIV ಹು 146)

### ಬೆಟ್ಟದಪುರ

### ಅದೇ ಗುಡಿಯಲ್ಲಿರುವ ಹಿತ್ತಾಳೆ ನವಿಲುವಾಹನದ ಮೇಲೆ

Similar to the above, this also records the gift of a bras peacock vehicle by the same donor to the same god.

However,it is dated saka 1789 , Prabhava, magha su 1, Mondya. The titibi corresoponds to 1868 A.D., Janury 25. The weekday would be Saturdya.

1. ಶಾಲಿವಾಹನಶಕವರ್ಷಂಗಳು 1789ನೇ ಸಂ ವರ್ತಮಾನವಾದ
2. ಪ್ರಭವಸಂವತ್ಸರದ ಮಗ ಶ್ದು 1 ಸೋಮವರದಲ್ಲು ಸಕಲಸುರವರಕುಟಮಣಿ

3. ಗಣಕಿರಣನೀರಾಜಪದಜೀವಯುಗಳರಾದ ಬೆಟ್ಟದಪುರರಾದ ಶಿಡ್ಲಮ
4. ಲಿಕಾರ್ಜುನಸಾಮಿಯರ ಸಂನಿಧಿಗೆ॥
5. ಶ್ರೀಮದ್ರಾಜಾಧಿರಾಜ ಮಹಾರಾಜ ಚಕ್ರವರ್ತಿಮಂಡಲಾನುಭೂತ
6. ದಿವ್ಯ ರತ್ನಸಿಹಾಸನಾರೂಡರಾದ ಶ್ರೀ ಶ್ರೀಮನ್ಮಹಿಶೂರಪುರವರಾಧೀಶ
7. ಶ್ರೀಕೃಷ್ಣರಾಜವಡೆಯರವರ ಪಾದಸೇವಕನಾದ ಹಜೂರುಮೋದೀಖಾನೆ ಸಾವಕಾರ
8. ಬೆಟ್ಟದಪುರದ ಮೇಗಳಮನೆ ಲಿಂಗಣ್ಣ ಮಗ ನಾಗಶಟಿಯು ಮಾ
9. ಖ ವಪಿಶಿದ ಹಿತ್ತಾಳೆ

**ಪಿರಿಯಾಪಟ್ಟಣ 65 (XIV ಹು 147)**

**ಬೆಟ್ಟದಪುರ**

**ಅದೇ ಗುಡಿಯಲ್ಲಿರುವ ದೇವರ ಹಿತ್ತಾಳೆ ಪ್ರಭಾವಳಿ ಮೇಲೆ**

It states that brass prabhavali is the gift of Venkatarmanaiya, it is in characters of the 19 th century.

ವೆಂಕಟರಮಣ್ಣೈಯನವರ ಧರ್ಮ॥

**ಪಿರಿಯಾಪಟ್ಟಣ 66 (XIV ಹು 148)**

**ಬೆಟ್ಟದಪುರ**

**ಗ್ರಾಮಸ್ಥರ ಹೊಲದಲ್ಲಿರುವ ನೆಟ್ಟ ಕಲ್ಲು**

This fragmentary record of c. 17th century seems to record the grant of a village.It contains only Pprtions of imprecations

1. ಕಾರಿ__________ರಾಜ್ಯ__________
2. ದೊರೆಗಳಾಗಲಿ__________ಳ_____ಕಳ__________ಆರು ಯಿ ಧರ್ಮ

3. ಕೆ ತಪ್ಪಿಯೆರಡ ನೆನೆಸ್ತರೂ ಯಿದಕೆ ತಪ್ಪಿದವನು ತಂನ________

4. ತಾಯಿಗೆ ತಪ್ಪಿದವನು ಅವ ಮಾಡಿದ ಧರ್ಮವೆಲ್ಲಾ ನಿಸ್ಫಲ_________

5. ಅವನ ಹೆಂಡತಿನು ಹೊಲ ಮಾದಿಗರಿಗೆ ಕೊಟಯೆಂದು ಕೊಟ

6. ಗ್ರಾಮ ಶಿಲಾಶಾಸನಾ ಶ್ರೀ

**ಪಿರಿಯಾಪಟ್ಟಣ 67 (j 1924–114)**

**ಬೆಟ್ಟದಪುರ**

**ಮಾರಿ ದೇವಾಲಯದ ಹತ್ತಿರ ಮನೆಯೊಂದರ ಹಿತ್ತಲಲ್ಲಿರುವ ಕಲ್ಲು**

This epigraph, in characters of the $17^{th}$ century, records the grant of land by Lakkideveyya and Ramayyadevayya, sons of Viaram,ayyadevayya, with the approval of the inhabitants of the village hiriyapura, Bettadapura for the service of god Mallikarjuna. It is dated Mondya, Phalguna su. 3, of the year Sarvajit. The titbi corresponds to 1648 A.D. February 16. But Sarvajiit. The titbi Wendesdya and not Mondya as stated in the record.

1. ಸರ್ವಜಿತುಸಂವತ್ಸರದ ಫಾಲ್ಗುಣ ಸು 3 ಸೋಮ

2. ವಾರದಲ್ಲು ವೀರರಮಯ್ಯ ದೇವಯ್ಯಂಗಳ ಮಕ್ಕಳು ಲಕ್ಕಿ

3. ದೇವಯ್ಯಗಳು ರಾಮಯ್ಯದೇವಯ್ಯಗಳು ಹಿರಿಯ

4. ಪುರ ಬೆಟ್ಟಪುರ ಮಲ್ಲಿನಾತಪುರ ಮಲ್ಲಾಪುರ

5. ಹರದುರಪುರ__________ಅಂತು ಯಲ್ಲಾದರ

6. _________ಸಮ್ಮಪಡದು ಮಹಾಮಲ್ಲಿಕಾ

7. ರ್ಜುನದೇವರಿಗೆ ಪ್ರೀತಿಮಾಡಿ ಕೊಟ್ಟ 8 ಕೊ

8. ಳಗದ ಸೀಮೆಯ ದಾನಸಾಸನವ ಹುಇ

9. ಸಿದರು________ಮಲ್ಲಿಕಾರ್ಜುನದೇವಸೋ

10. ಮಿಯ ಸೋಮಿಂಗೆ ಅರು ಅಳುಪಿದವ

11. ರು ಗಂಗೆಯ ತಡಿಯಲ್ಲಿ ಕವಿಲೆಯ ಕೊಂ

12. ದ ಪಾಪಕೆ ಹೋಹರು ಕತ್ತೆಯ ತಿಂದವರು

13. ಹುಲಿತ ನಾಯ ತಿಂದವರು.

**ಪಿರಿಯಾಪಟ್ಟಣ 68 (ರಿ 1924–115)**

**ಬೆಟ್ಟದಪುರ**

**ಅದೇ ಸ್ಥಳದಲ್ಲಿ ಇರುವ ಇನ್ನೊಂದು ಕಲ್ಲು**

This damaged inscription seems to record the grant of some land in Kudakur (?) by the inhabitants of Hiriyapura and other places. The details are lost. It is in characters of c. 17th century.

1. –3 (ಸವೆದಿದೆ)

2. ಹಿರಿಯಪುರ ಬೆಟ್ಟದಪುರ ಮಲ್ಲಿನಾಥಪುರ

3. __________ಪುರಾದ ಮಲ್ಲಾಪುರದಾ ದಾ

4. ನಸಾಸನ ಕ್ರಮ. ಕುಡಕೂರ 9_________ಕೊ

5. ಕೊಡಗಿಯನ್ನ ಕೊಟ್ಟರು_____________

6. ಅಳುಪಿದವರು ಗಂಗೆಯ ತಡಿಯಳಿ ಕ

7. ವಿಲೆಯ ಕೊಂದ ಪಾಪಕೆ ಹೋಹರು

8. ಹುಳಿತನಾಯ ತಿಂದವರು ಹುಲಿತ

9. ನಾಯ ತಿಂಬರು ಮಂಗಳಮಹಾ ಶ್ರೀ ಶ್ರೀ ಶ್ರೀ

## ಪಿರಿಯಾಪಟ್ಟಣ 69 (j 1924–116)

### ಬೆಟ್ಟದಪುರ

### ಸರ್ಕಾರಿ ಶಾಲೆಯ ಆವರಣದಲ್ಲಿರುವ ಕಲ್ಲು

This worn out record refers to the rule of Achyutaraya of Vijayanagara and appears to register a grant of land, probably for the service of the god on the hill. Details are lost.

1. __________ಮಹಾರಾಜಮಾ__________
2. __________ಪರಮೇಶ್ವರ__________
3. __________________ಪುತ್ರ ಅಚುತರಾಯ__________
4. __________ಬೆಟ್ಟದ ದೇವ__________
5. ಮ____________________________
6. __________ಯ__________ಗಾ__________ಯ_____
7. –11(ಸವೆದಿದೆ)

12. ____________ವಾ ಯೋ ಹರತೇ ವಸುಂ
13. ದರಾ ಪಷ್ಟಿವರ್ಷಸಹಪ್ರಾಣೊ ವಿಷ್ಠಾ
14. ಯಾಂ ಜಾಯತ್ರೇ ಕ್ರಿಮಿಃ ಜಾದಗಿದ
15. ಮುದ್ದಗಾವುಣ್ಣ ತಮ್ಮ ಅಯ್ಯ________
16. ಗಾ________ಯಾ ಧರ್ಮ________ ಯದೇವ______

## ಪಿರಿಯಾಪಟ್ಟಣ 70 (IV ಹು 40)

## ಬೆಟ್ಟದಪುರ

## ಮಲ್ಲಿಕಾರ್ಜುನಬೆಟ್ಟದ ಮೇಲೆ ದೇವಸ್ಥಾನದದೊಳಗೆ ನೆಟ್ಟ ಒಂದನೆಯ ಕಲ್ಲು

This record registers the grant of the village Bangaruvale to got Annadani mallikarjuna by Dasari-nayaka of Yitagainur. It mentions Sirangala-Sthala in Arakaligodu-Sime. The gift village appers to have been situated herein. The latter portion of the record is worn out.

It is in characters of c.16th centuy and is dated the year chitrabhanu, Sravana su. 14. These details are sufficient for verifications.

1. ಚಿತ್ರ ಭಾನುಸಂವತ್ಸರದ ಸ್ರಾವಣ ಶುಧ 14 ಲು
2. ಶ್ರೋಮನ್ಮ ಮಹಾದೇವೋತ್ತಮ ಶ್ರೀ
3. ಗಿರಿ ಅಂನಧನಿ ಮಲ್ಲಿಕಾರ್ಜುನಸ್ವಾಮಿ
4. ಯವರ ದಿವ್ಯ ಶ್ರೀಪಾದಪದ್ಮಂಗಳ
5. ಲಿ ಯಿಟಗೈಯನುರ ದಾಸರಿನಾಯ್ಕನು
6. ಕೊಟ್ಟ ಬಂಗರುವಳೆಯ ಗ್ರಾಮವೆಂತೆಂದರೆ।
7. ಸ್ವಾಮಿಯವರ ಪಾದಕೆ ನಾನು ನಾಡಕಾರ್ಯ ಮಾಡಿ
8. _________ದೇವರು ಸ್ವಾಮಿಯವರ ಪಾದಕೆ ನಂಮ್ಮ
9. ಅರುಕಲುಗೋಡಸೀಮೆಯಲಿ ಸಿಂರಂಗಾಲದ
10. ಸ್ತಳವನು ಕಲ್ಲ ನೆಟ್ಟು ಕೊಟ್ಟೆನು.ಯಂದು ಬಿಂ
11. ನಹವ ಮಾಡಿಕೊಂಡದಕ್ಕೆ ನಮ್ಮ ಕುಲಸ್ವಾ

12. ಮಿ ಅಂನಧಾನೀಸ್ವರಸ್ವಮಿಯವರ ಪಾದ

13. ದಾಲಿ ವೀರಣ್ಣಸ್ವಾಮಿಯವರ ಪಾದ

**ಪಿರಿಯಾಪಟ್ಟಣ 71 (IV ಹು 41)**

**ಬೆಟ್ಟದಪುರ**

**ಅದೇ ದೇವಸ್ಥಾನದಲ್ಲಿ ನೆಟ್ಟ ಎರಡನೆಯ ಕಲ್ಲು**

The last portion of this epigraphaq is highly damaged. It registers a gift of 33 village, 12, 8 and 13 of them situated rsspectively in Tunga, ravunduru and Balasoge stbalas.in nanjarayapattna sime, by the Changalva chife Piriyayarajadeva to god annadani Mallikarjunadeva, for his own merit and of his parents.

The record is dated saka 1508, vyaya, jyeshtha su. 1, corresponding to 1586 A.D., May 9.

1. ಶುಭಮಸ್ತು । ನಮಸ್ತುಂಗಸುರಚುಂಬಿ । ಚಂದ್ರಚಾಮರಚಾರವೇ ತ್ರೈಲೋ
2. ಕ್ಯನಗರಾಂಭಮೂಲಸ್ತಂಭಾಯ ಸಂಭವೇ । ಸ್ವಸ್ತಿ ಶ್ರೀವಿಜೆಯಾದ್ಬುದಯ
3. ಸಾಲಿವಾಹನಸಖ 1508 ನೆಯ ವ್ಯಯಸಂವತ್ಸರದ ಜೇಷ್ಠ ಶು 1 ಲೂ
4. ಯದುಕುಲೋದ್ಭವರಾದ। ಸೋಮವಂಶದ ಹರಿಗೋತ್ರದ ಆಸ್ಲಾಯನಾಸೂತ್ರದ
5. ರುಕುಸಾಕಾಧ್ಯಯಿಗಳಾದ ಶ್ರೀಮನ್ಮಹಮಂಡಳಿಕ ಮಂಡಲೇಶ್ವರ ಕುಲೋ
6. ತ್ತುಂಗಚಂಗಾಳ್ವ ಶ್ರೀವೀರ ಶ್ರೀಖಂಠರಾಜಯದೇವಮಹಾಅರಶುಗಳ ಗ
7. ರ್ಭಪರಿಪೂರ್ನಸುಧಾಕರರದ ಪಿರಿಯರಾಜೆಯದೇವಮಹಾಅರಶುಗ
8. ಳು ತಂದೆ ಶ್ರೀಖಂಠೊಡೆಯರಿಗು ।ತಾಯಿ ವಲ್ಲಭಂಮಗು ಸುತ ಪಿರಿವೊ

9. ಡೆಯರಿಗೆ ಪುಣ್ಯವಾಗಬೇಕೆಂದು ಶ್ರೀಮನ್ಮಹಾದೇವೋತ್ತಮ ಶ್ರೀ

10. ಗಿರಿ ಅಂನದಾನಿ ಮಲ್ಲಿಕಾರ್ಜುನಸ್ವಾಮಿಯ । ಅಂಗರಂಗಭೋಗ ನಯಿವೇದ್ಯಕೆ

11. ಸೆಲವಾಗಿ ಭಕ್ತಿಪೂರ್ವಕದಿಂದ । ನಂಜರಾಯಪಟ್ಟಣದ ಸೀಮೆಯೊ

12. ಳಗಾದ । ತುಂಗದಸ್ತಳವನೂ । ಅದಕ್ಕೆ ಸಲುವ ಗ್ರಾಮಗಳನು । ಪಿರಿಯ

13. ಸಮುದ್ರ ಆನೆವಾಳು ಕಉಲನಹಳಿ ಲಕೂರು ಆನವೊಮ ಕೊ

14. ತ್ತವಳಿ ಮೇಲೂರು । ಮರದೂರು ।ಹುಲಿಯನಹಳ್ಳಿ । ಹಂದಿಗನಹ।

15. ಳಿ ಉರುಗುವಳಿ । ಬಿಳುಗಲಿ । ಸಹ ಗ್ರಾಮ 12 । ರಾವಂದೂರುಸ್ತಳದ ಗ್ರಾ

16. ಮ ಹೊಂನೆಯನಹಳಿ । ಅರೆಯನಹಳಿ ।ಹೊಸಹಳಿ ।ಬೋಗನಹಳಿ ।

17. ಕೋಡಿಹಳಿ । ನಾಗನಹಳಿ । ಹಂದುರವಳಿ ಸಹ ಗ್ರಾಮ 8 ಬಳಸೋಗೆಯ

18. ________________ಸಿ ಕೊಟೆವಾಗಿ ಈ ಧರ್ಮಕ್ಕೆ ಆರೊ

19. ಗುರುದಯಿವವನೂ । ವಾರ

20. ___________ನು । ಶ್ರೀವೀರಜಂಗಮ । ಸಾವಿರ______

21. ____________ಕೊಂದ ಪಾಪಕೆ ಹೋಹನು

22. ________________ಮಲ್ಲಿಕಾರ್ಜುನ ಗಿರಿಯನು ವೊ

23. ____________ಯಿದಕು ತಪ್ಪಿದಡೆ ತಂಮ ತಂದೆ ತಾ

24. ______________ಸಿ______ತಪಿದರೆ ತಂಮ______

## ಪಿರಿಯಾಪಟ್ಟಣ 72

## ಬೆಟ್ಟದಪುರ

## ಅದೇ ಕಲ್ಲಿನ ಮೇಲ್ಭಾಗದಲ್ಲಿ

This record of the same period aas above, registers the grant of Virambudhi for the merit or Viraraja-Vodeya and Piriyasamundra for the merit of Srikanthaodeya and Vallabhamma, by Piriyodeya. The gift appers to have been made as Kanamji.

*ಬಲಭಾಗ*

1. ಪಿರಿಯೊಡೆಯರು ವೀರಾಂಬಂಧಿಯನು
2. ಫಲಪೂಜೆಗೆ । ವೀರರಾಜವಡೆಯರಿಗೆ ಪು
3. ಣ್ಯ ವಾಗಲಿ ಎಂದು ಕೊಟ್ಟ ಸ್ತಿರ ಸಾ
4. ಸನಾ । ಕಾಣಾಂಜಿ ಕೊಟ್ಟ ಧರ್ಮ ಶ್ರೀ ಕಂಠೊಡೆರಿಗೆ

*ಎಡಭಾಗ*

5. ಪಿರಿಯರ ಸಮುದ್ರವನು । ಫಲ
6. ಪೂಜಿಗೆ ವಲ್ಲಭಂಮಗು
7. ___ಯಂನು ಪುಂಣ್ಯವಾಗಲಿ
8. ಯೆಂದು ಕೊಟ್ಟ ಸ್ತಿರಸಾಸನ ।
9. ___ಕೊಟ್ಟ ಧರ್ಮ ವಮ್ಮಭಂಮಗೆ

### ಪಿರಿಯಾಪಟ್ಟಣ 73

### ಬೆಟ್ಟದಪುರ

### ಅದೇ ದೇವಸ್ಥಾನದ ಮೆಟ್ಟಿಲಿನ ಮೇಲೆ

This 19th century lable, engraved by the side of a carved figure of a devotee, rends Rajadeva.

ರಜದೇವ

### ಪಿರಿಯಾಪಟ್ಟಣ 74

### ಬೆಟ್ಟದಪುರ

### ಅದೇ ದೇವಸ್ಥಾನದ ಮೆಟ್ಟಿಲಿನ ಮೇಲೆ

This 19th century lable, engraved by the side of a carved figure of a devotee, rends Rajadeva.

ಕ್ರುತಯುಗದಲ್ಲಿ ದೇವರುಷಿ ಕೈಯಲ್ಲಿ ಪೂಜೆಕೊಂಡಂಥಾ ಸ್ವಾಮೀ

1. ತ್ರೇತಾಯುಗದಲ್ಲಿ ನಾಗಾರ್ಜುನನ ಕೈಯಲ್ಲಿ ಪೂಜೆಕೊಂಡಂಥಾ ಸ್ವಾಮೀ
2. ದ್ವಾಪರಯುಗದಲ್ಲಿ ಪುರುಷಾಮುಗ್ರದ ಕೈಯಲ್ಲಿಯೂ ಸಿಡ್ಲು ಕೈಯಲ್ಲಿ ಕೈಯಲ್ಲಿ ಪೂಜೆಕೊಂಡಂಥಾ ಸ್ವಾಮೀ
3. ಕಲಿಯುಗದಲ್ಲಿ ಕಪಿಲೆ ಕೈಲ್ಲಿ ಪೂಜೆಕೊಂಡಾಂಥ ಅಂನ್ನದಾನಿ ಮಲ್ಲಿಕಾರ್ಜುನಸ್ವಾಮಿಯವರ ಶ್ರೀಪಾದ
4. ಪದ್ಮಂಗಳಿಗೆ ಸ್ವಾಸಲೆಯ ಚೆಂನವೀರಗೌಡರ ಕುಮಾರ ಗಂಗಾಧರೈಯ್ಯನೂ ಮಾಡಿಸದಂ
5. ಥಾ ಯೀ ಸೇವೆ ಉನ್ನತ್ಥ

## ಪಿರಿಯಾಪಟ್ಟಣ 75(j 1944–18)

### ಬೆಟ್ಟದಪುರ

### ಅದೇ ದೇವಸ್ಥಾನದ ನವರಂಗದಲ್ಲಿ ಇಟ್ಟಿರುವ ದಕ್ಷಿಣಾಮೂರ್ತಿ ವಿಗ್ರಹದ ಪೀಠದ ಮೇಲೆ

This small inscription of c,16th century merely gives the date, probably of the consecration of the icon of Dakshinamurthi, as Bahudhanya, Magha su. 1. These details are not sufrficient for verification

1. ಬಹುಮಾನ
2. ಸಂವತ್ಸರದ
3. ಮಾಘ ಸು1
4. ______ಲ್ಲು

## ಪಿರಿಯಾಪಟ್ಟಣ 76(j 1944–19)

### ಬೆಟ್ಟದಪುರ

### ಅದೇ ದೇವಸ್ಥಾನದ ಉತ್ತರಕ್ಕೆ ಇರುವ ನಂದಿಕಂಬದ ಬುಡದಲ್ಲಿ ಹಾಸು ಬಂಡೆಯ ಮೇಲೆ

This records the gift of the nandikamba to got Mallikarjuna by Gangadharyaiya, son of savili Chennavir-Gruda. This undated is in c.17th century characters. Cf. No sufficient for verification

1. ಶ್ವಸಿಲಿ ಚೆಂನ್ನವೀರಗ ಉ
2. ಡರ ಮಾಗ ಗಂಗಾಧ
3. ರೈಯನ ಶೇವೆ

### ಪಿರಿಯಾಪಟ್ಟಣ 77(IV ಹು 152)

### ಬೆಟ್ಟದಪುರ

### ಅದೇ ದೇವಸ್ಥಾನದ ಒಳಪ್ರಕಾರದಲ್ಲಿ ಬಾಗಿಲ ಎದುರಿಗೆ ಸಿಡಿಲುಗಂಡಿಯ ಬಳಿ ಗಂಟೆಯ ಮೇಲೆ

It records the gift of a bell to god Mallikarjuna by channa-setti of sirangala, on Vibhava, Vaisakha ba. 7. The year in Christian era is also given as 1865. The details correspond to 14th may.

ಇಂಗ್ಲೀಷ್ ಸಂ 1868 ವಿಬವ ಸಂ। ವಿಶಾಕ ಬುಳ 7 ಯಲು ಶಿರಂಗಾಲದ ಅಂನ್ನದಾನಿ ಚದ್ರಿಶೋಗ ಚನ್ನಶೆಟ್ಟರು ಮಲ್ಲಿಕಾರ್ಜೂನಸೌಆಮಿಗೆ ಯಿ ಗಂಟೆ

### ಪಿರಿಯಾಪಟ್ಟಣ 78(X IV ಹು 153)

### ಬೆಟ್ಟದಪುರ

### ಅದೇ ದೇವಸ್ಥಾನದ ಹಿತ್ತಾಳೆ ಕೊಂಡದ ಮೇಲೆ

It records the gift of a brass-pot to god Mallikarjuna by Annapurnamma.It is in characters of the 19th century.

ಶ್ರೀ ಮಲ್ಲಿಕಾರ್ಜುನ ॥ ಯಡ॥ ಶ ॥ಮಗಳೂ ॥ ಅಂನಪೂರ್ಣಂಮನ ॥ ಶೇವಾತ್ ॥

### ಪಿರಿಯಾಪಟ್ಟಣ 79(X IV ಹು 154)

### ಬೆಟ್ಟದಪುರ

### ಅದೇ ದೇವಸ್ಥಾನದಲ್ಲಿ ತಾಂಡವೇಶ್ವರ ಚಂಡಿಕಾಂಬಿಕೆ ವಿಗ್ರಹಗಳ ಪೀಠಗಳಲ್ಲಿ

It states that the image of Tandavesvara and chandikambika are the gift of nanjarajavodye the kalale chife,son of Viraraj-vodye and grandson of Doddaiah, the dalavayi or Mysore. He belong to

BHaravaja-gotra, A salyana-sutra and Rik sakha. The recode belongs to the 18th century.

1. ಭಾರದ್ವಾಜಗೋತ್ರದ ಆಶ್ಲಾಯನಸೂತ್ರದ ರುಕ್ಯಾಖಾದಧ್ಯಾಯಿಗಳಾದ ಮಹಿಸೂರ ದಳವಾಯಿ ದೊಡ್ಡೈಯನವರ ಪೌತ್ರ.
2. ರಾದ ಕಳುಲೆ ವೀರರಾಜವಡೆರೈಯ್ಯನವರ
3. ಪುತ್ರರಾದ ನಂಜರಾಜವಡೆರೈಯ್ಯನವರ ಸೇವೆ.

**ಪಿರಿಯಾಪಟ್ಟಣ 80(j 1924–112 )**

**ಬೆಟ್ಟದಪುರ**

**ಮಲ್ಲಿಕಾರ್ಜುನ ಬೆಟ್ಟದ ಬುಡದಲ್ಲಿ ಏಣಿಹನುಮಂತ ದೇವಸ್ಥಾನದ ದೇವರ ವಿಗ್ರಹದ ಮೇಲೆ**

The epigraph of c.16th century, records the names of details like Lakshmana, Hanumanta, and Makaradhvaja.

1. ಲಕ್ಷ್ಮಣದೇವರು
2. ವೀರಹನುಮಂತದೇವರು
3. ಹನುಮಂತದೇವರು
4. ಮಕರಧ್ವಜ ತುರುಮ
5. ಮಕರ

**ಪಿರಿಯಾಪಟ್ಟಣ 81(j 1924–113 )**

**ಬೆಟ್ಟದಪುರ**

**ಅದೇ ಬೆಟ್ಟದ ಮಧ್ಯದಲ್ಲಿ ಕನಕದೇವಗವಿಯ ದ್ವಾರದಲ್ಲಿ ಬಂಡೆಯ ಮೇಲೆ**

This record states that the cave was excavated by Kankaladeva of Haradur belonging to the line of the illustrious mabamabattian

Hasapada-padNTI, for the use of ascetics. It mentions Viranna. It is dated the year Siddharthi, samkaranti These details are insufficient for verification. It is in characters of c.17th century.

1. ಸಿದ್ಧರ್ಥಿಸಂವಚರದ
2. ಸಂಕ್ರಾತಿಯ ಶ್ರೀಮತು
3. ಮಾಹಾಮತ್ತಿನ ಹು
4. ಸಪಾದಪದಂತಿ
5. ಹರದೂರ ಕಂಕಳದೇವರು
6. ಮಾಡಿದಂತಹ
7. ಯತಿಜತಿಗಳಿಗೆ
8. ___ಬಕುತಿ ಗುಹೆ
9. ವೀರಣ್ಣನ

**ಪಿರಿಯಾಪಟ್ಟಣ 82(IV ಹು 43 )**

**ಬೆಟ್ಟದಪುರ**

**ಅದೇ ಬೆಟ್ಟದ ಬುಡದಲ್ಲಿ ಗೋಪುರದ ಕೆಳಗೆ**

This short epigraph in characters of the 17th century, records the obeisance of Kalakande Malla and Masavandi-vaderu of Savandit to got mallikarjuna.

1. ಶ್ರೀಮತು ಸಾವಂದಿಯ ಕಲವಂದೆ ಮಲ್ಲಂ ಮಾಸವಂದಿವಡೇರು
2. ___ಮಲ್ಲಿಕಾರ್ಜುನಗೆ ನಮಸ್ಕಾರ

**ಪಿರಿಯಾಪಟ್ಟಣ 83(IV ಹು 44 )**

**ಬೆಟ್ಟದಪುರ**

**ಅದೇ ಗೋಪುರದ ಕೆಳಗೆ ಬಲಗಡೆ ಆನೆಯ ವಿಗ್ರಹದ ಮೇಲೆ**

This label inscription of the 18th century states that the elephant is the pattadane (royal elephant) of god Annadani Mallikarjuna.

ಪ್ರಳೆಯಕಾಲದಲ್ಲಿ ಅಮದಾನಿ ಮಲ್ಲಿಕಾರ್ಜುನನಾ ಪಟದನೆ

**ಪಿರಿಯಾಪಟ್ಟಣ 84(XIV ಹು 45 )**

**ಬೆಟ್ಟದಪುರ**

**ಅದೇ ಗೋಪುರದ ಕೆಳಗೆ ಎಡಗಡೆಯ ಆನೆಯ ವಿಗ್ರಹದ ಮೇಲೆ**

Similar to the above but names the god as Sidla Mallikarjuna.

ಪ್ರಳೆಯಕಾಲದಲ್ಲಿ ಸಿಡ್ಲ ಮಲ್ಲಿಕಾರ್ಜುನ ಪಟ್ಟದ ಆನೆ

**ಪಿರಿಯಾಪಟ್ಟಣ 85(XIV ಹು 149)**

**ಬೆಟ್ಟದಪುರ**

**ಅದೇ ಬೆಟ್ಟಕ್ಕೆ ಹೋಗುವ ದಾರಿಯಲ್ಲಿ ಸೂಳೆ ತೋರಣಗಂಬದ ಮೇಲೆ**

It records that the gatewy (torana) of the Annadani Mallikarjuna temple was caused to be made by Muddu Mallikayya. It is in characters of c.17th century.

ಶ್ರೀ ಅಂನದಾನಿ ಮಲ್ಲಿಕಾರ್ಜುನ ಸ್ವಾಮಿಯವರ ಶ್ರೀ ಪಾದಕೆ ಮುದ್ದು ಮಲ್ಲಾಜಯನವರು ಮಾಡಿಸಿದಂಥಾ ತೋರಣದ ಸೇವೆಗೆ

ಮಂಗಳಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ ಶ್ರೀ

**ಪಿರಿಯಾಪಟ್ಟಣ 86(XIV ಹು 150 )**

**ಬೆಟ್ಟದಪುರ**

**ಅದೇ ಬೆಟ್ಟಕ್ಕೆ ಹತ್ತುವಲ್ಲಿ ಗೋಪುರದ್ವಾರಕ್ಕೆ ಮೇಲುಗಡೆ ಎರಡನೇಯ ತೋರಣಗಳಿರುವ ಅಡ್ಡ ತೊಲೆಯ ಮೇಲೆ**

This record of the same period as of No.85 above, states that the gateway was got constructed by Kempaji.

1. ಶ್ರೀಮತೂ ತಿರುಮಲೆಯ ಜಿಮಾತ ಕೆಂ
2. ಪಾಜಿ ಕುಟಿಸಿದ ತೋರಣ

**ಪಿರಿಯಾಪಟ್ಟಣ 87(XIV ಹು 151 )**

**ಬೆಟ್ಟದಪುರ**

**ಅದೇ ಬೆಟ್ಟಕ್ಕೆ ಹತ್ತುವ ದಾರಿಯಲ್ಲಿ ಮಲ್ಲಿಕಾರ್ಜುನ ದೇವಸ್ಥಾನದ ಪ್ರಾಕಾರದ ಹೊರಗೆ ಮಂಟಪದ ಬಳಿ ಮೆಟ್ಟಲಿನ ಮೇಲೆ**

This short inscription reads Rudragana Sksbi Rudragana Mentioned here mey be the changalva chife of that name.It is in characters of the 16th Century.

ರುದ್ರಗಣ ಸಾಕ್ಷಿ

ಬಹುತೇಕ ಎಲ್ಲಾ ಶಾಸನಗಳಲ್ಲಿಯೂ, ಮಲ್ಲಿಕಾರ್ಜುನ ದೇವರನ್ನು ಅಂಗದಾನಿ, ಅನ್ನದಾನಿ, ಸಿಡಿಲು ಮಲ್ಲಿಕಾರ್ಜುನ ಎಂದು ಉಲ್ಲೇಖಿಸಿರುವುದನ್ನು ಕಾಣಬಹುದು. ಇವುಗಳು ಚಂಗಾಳದ ಅರಸರು ಹಾಗೂ ಭಕ್ತಾದಿಗಳು ನೀಡಿದ ದಾನದತ್ತಿ ವಿವರಗಳನ್ನು ಒಳಗೊಂಡಿವೆ. ದಾನದಲ್ಲಿ ದೇವರ ಸೇವೆಗೆಂದು ಭೂಮಿಯನ್ನು ದತ್ತಿ ನೀಡಿದ, ದೇವಸ್ಥಾನಕ್ಕಾಗಿ ಕೊಡಲ್ಪಟ್ಟ ಗಂಟೆ, ವಿಗ್ರಹ, ಇತ್ಯಾದಿಗಳಂತಹ ಪರಿಕರಗಳ ಬಗೆಗಿನ ವಿವರಗಳನ್ನು ಒಳಗೊಂಡಿವೆ. ಜೊತೆಗೆ ಜನರ ಉಪಯೋಗಕ್ಕಾಗಿ ಕೆರೆಯನ್ನು ಕಟ್ಟಿಸಿ ಕೊಟ್ಟಿರುವ ಬಗ್ಗೆ ಶಾಸನಗಳಲ್ಲಿ ಉಲ್ಲೇಖಗಳಿವೆ.

ಹೀಗೆ ಇಲ್ಲಿನ ಶಾಸನಗಳಲ್ಲಿ ಸ್ಥಳೀಯ ಇತಿಹಾಸವನ್ನರಿಯಲು ಅವಶ್ಯವಾದಂತಹ ಸಾಕಷ್ಟು ಅಂಶಗಳನ್ನು ನಾವು ಮನಗಾಣಬಹುದು. ಇವುಗಳು ಇತಿಹಾಸದ ರಚನೆಗೆ ಊರುಗೋಲುಗಳಾಗಿವೆ. ಇವುಗಳು ಅಂದಿನ ಸ್ಥಿತಿಗತಿಗಳ ಬಗ್ಗೆ ಬೆಳಕಿನ ಕ್ಷಕಿರಣ ಬೀರಲು ಸಹಾಯಕವಾಗಿವೆ ಎನ್ನಬಹುದು.

** ** **

# ಅಧ್ಯಾಯ–4

# ಧಾರ್ಮಿಕ ಮತ್ತು ಸಾಂಸ್ಕೃತಿಕ ವೈಶಿಷ್ಟ್ಯಗಳು

**ಧಾರ್ಮಿಕ ವೈಶಿಷ್ಟ್ಯಗಳು :**

ಬೆಟ್ಟದಪುರದ ಸುತ್ತಮುತ್ತಲು ಚೋಳರಿಂದ ನಿರ್ಮಿತವಾದ ಹಲವಾರು ದೇವಾಲಯಗಳಿದ್ದು ಭಕ್ತಾದಿಗಳನ್ನು, ಜನರನ್ನು ಆಕರ್ಷಿಸುತ್ತಿವೆ. ಬಹುತೇಕ ದೇವಾಲಯಗಳು ಚೋಳರು ಮತ್ತು ಚಂಗಾಳ್ವರ ಕಾಲದಲ್ಲಿ ನಿರ್ಮಾಣವಾದವುಗಳಾಗಿವೆ.

## ** ಮುಖ್ಯ ದೇವಾಲಯಗಳು **

**ಶ್ರೀ ಸಿಡ್ಲು ಮಲ್ಲಿಕಾರ್ಜುನ ಸ್ವಾಮಿ ದೇವಾಲಯ**

ಬೆಟ್ಟದಪುರದ ಕೇಂದ್ರ ಭಾಗದಲ್ಲಿದೆ. ಕಲ್ಲಿನಿಂದ ನಿರ್ಮಿತವಾಗಿದ್ದು ಮೊದಲು ಜೈನ ಬಸದಿಯಾಗಿತ್ತು, 14ನೇ ಶತಮಾನದಿಂಚೇಗೆ ಶೈವ ಪಂಥಕ್ಕೆ ಸೇರ್ಪಡೆಯದಂತೇ ಕಂಡುಬರುತ್ತದೆ. 13–14ನೇಶತಮಾನದಲ್ಲಿ ಶೈವ ಪಥದ ಅಭಿವೃದ್ಧಿಯೊಂದಿಗೆ ಜೈನ ಧರ್ಮ ಅವನತಿಯತ್ತ ಸಾಗಿತ್ತು. ಬಸದಿಗಳು ಅನಾಥವಾಗುತ್ತಾ ಸಾಗಿದಂತೇ ಶೈವ ಅನುಯಾಯಿಗಳು ಲಿಂಗವನ್ನು ಪ್ರತಿಷ್ಠಾಪಿಸಿದರು ಎನ್ನಬಹುದು. ನಂತರ ಇವುಗಳು ಈಶ್ವರನ ದೇವಾಲಯಗಳಾಗಿ ಪರಿವರ್ತನೆಗೊಂಡವು, ಈ ದೇವಾಲಯ ಪೂರ್ವಾಭಿಮುಖವಾದ ದ್ರಾವಿಡ ಶೈಲಿಯ ಏಕಕೂಟ ದೇವಾಲಯವಾಗಿದೆ. ಗರ್ಭಗೃಹದಲ್ಲಿ ಲಿಂಗ, ಬಸವ, ನಟರಾಜ, ಪಾರ್ವತಿ ಮುಂತಾದ ವಿಗ್ರಹಗಳಿವೆ. ಚಂಗಾಳ್ವರ ವಾಸ್ತುಶೈಲಿ ಹೊಂದಿದ್ದು ಗರ್ಭಗೃಹದ ಮೇಲ್ಭಾಗದಲ್ಲಿ ಗೋಪುರವಿದ್ದು, ದೇವಾಲಯದ ನಾಲ್ಕು ದಿಕ್ಕಿನ ಮೂಲೆಯಲ್ಲಿ ಬಸವನ ವಿಗ್ರಹಗಳಿವೆ.

**ಪವಾಡ ಬಸವೇಶ್ವರ ದೇವಾಲಯ**

ಸಿಡಿಲು ಮಲ್ಲಿಕಾರ್ಜುನ ಸ್ವಾಮಿ ದೇವಾಲಯದ ಎದುರಿನಲ್ಲಿದೆ. ಇದು ಕೂಡಾ ದ್ರಾವಿಡ ಶೈಲಿಯ ಏಕಕೂಟದೇವಾಲಯ, ಪಶ್ಚಿಮಾಭಿಮುಖವಾಗಿದ್ದು, ನವರಂಗದ ಹೊಸ್ತಿಲ 2 ಕಡೆ ದ್ವಾರಪಾಲಕರು, ಮತ್ತು ಸಪ್ತಮಾತೃಕೆಯರ ಸಣ್ಣ ಸಣ್ಣ

ವಿಗ್ರಹಗಳಿವೆ. ಇತ್ತೀಚೆಗೆ ಪ್ರವೇಶ ದ್ವಾರದ ಮೇಲ್ಭಾಗದಲ್ಲಿ ಸಿಮೆಂಟಿನ ಬಸವನ ವಿಗ್ರಹವನ್ನು ಸ್ಥಾಪಿಸಲಾಗಿದೆ.

**ಶ್ರೀ ಕೋದಂಡರಾಮ ದೇವಾಲಯ**

ಮಲ್ಲಿಕಾರ್ಜುನ ಸ್ವಾಮಿ ದೇವಾಲಯದ ಹಿಂಭಾಗದಲ್ಲಿದ್ದು ಪೂರ್ವಾಭಿಮುಖ-ವಾಗಿದೆ. ಮೈಸೂರು ಒಡೆಯರ ಕಾಲದಲ್ಲಿನ ಹಿಂದೂ-ಮುಸ್ಲಿಂ ಮಿಶ್ರ ಶೈಲಿಯನ್ನು ಕಾಣಬಹುದಾಗಿದೆ. ಇಲ್ಲಿನ ವಿಗ್ರಹ ತುಂಗದ ಹಾದಿಯ ರಾಮನವಮಿ ತೋಪಿನಲ್ಲಿ ಉಳುವಾಗ ದೊರೆತದ್ದು ಎಂಬ ಪ್ರತೀತಿಯಿದೆ.

**ಆಂಜನೇಯ ದೇವಸ್ಥಾನ**

ಮಲ್ಲಿಕಾರ್ಜುನ ಬೆಟ್ಟದ ಬುಡದಲ್ಲಿರುವ ದೇವಾಲಯವಾಗಿದೆ. 15 ಅಡಿಗಳಷ್ಟು ಎತ್ತರದ ಕಲ್ಲಿನ ಮೇಲೆ ಆಂಜನೆಯ ವಿಗ್ರಹ ಕೆತ್ತಲಾಗಿದೆ. ಲಕ್ಷ್ಮಣನ್ನು ಆಂಜನೇಯ ಭುಜದ ಮೇಲೆ ಕುಳಿತು, ಇಂದ್ರಜಿತುವಿನೊಂದಿಗೆ ಯುದ್ಧ ಮಾಡುತ್ತಿರುವ ಚಿತ್ರವಾಗಿದೆ. ಸ್ವಾಭಾವಿಕ ಕಲ್ಲಾಗಿರುವುದರಿಂದ ಏಣಿ ಹನುಮಂತರಾಯನ ಮೂರ್ತಿ ಎಂದು ಕರೆಯುತ್ತಾರೆ. ದೇವಸ್ಥಾನದ ಮುಂಭಾಗದ ಎಡಭಾಗಕ್ಕೆ ಒಂದು ಶಿವಲಿಂಗವಿದ್ದು ಅದರ ಮುಂದೆ ಗೂಡನ್ನು ತೊರೆದು ಗಣಪತಿ ಮತ್ತು ಶಿವಪಾರ್ವತಿಯರ ವಿಗ್ರಹವನ್ನು ಕೆತ್ತಲಾಗಿದೆ. ಇದರ ಮುಂಭಾಗ ಮತ್ತು ದೇವಸ್ಥಾನದ ಪೂರ್ವದಲ್ಲಿ ಗುಹೆಯಿದ್ದು, ಹತ್ತಲೂ ಮಟ್ಟಿಲುಗಳಿವೆ.

**ಪಾತಾಳ ಲಿಂಗೇಶ್ವರ ಗುಡಿ**

ಬೆಟ್ಟದ ಪಶ್ಚಿಮ ದಿಕ್ಕಿನಲ್ಲಿ ಬೆಟ್ಟ ಇಳಿಯುವಾಗ ಅರ್ಧದಲ್ಲಿ ದಕ್ಷಿಣದ ಎಡಭಾಗಕ್ಕೆ ಸಿಗುವ ದೇವಸ್ಥಾನ. ಮೂರು ಕಡೆಯ ಕಮಾನಿನಂತೆ ಸುತ್ತಿಕೊಂಡಿರುವ ಬಾಗಿಲು ನಿರ್ಮಿಸಿದ್ದು, ಅದರ ಕಲ್ಲಿನ ಮೇಲೆ ಬಸವನು ಒಂದು ಕಾಲನ್ನು ಮೇಲೆತ್ತಿರುವ ಚಿತ್ರದ ಕೆತ್ತನೆಯಿದೆ.

**ರುದ್ರ ಗುಡಿ**

ಬೆಟ್ಟದ ಪೂರ್ವದ ದಾರಿಯಲ್ಲಿ ಇರುವ ಗುಡಿಯಾಗಿದೆ. ಬಂಡೆಯೊಂದು ಕವಿದುಕೊಂಡು ಗುಹೆಯ ರೀತಿ ರಚನೆಯಾಗಿದೆ. ಇಲ್ಲಿ ಬಸವನ ವಿಗ್ರಹವಿದ್ದು ಅದನ್ನು ಪೂಜಿಸುತ್ತಾರೆ ಗರ್ಭಗುಡಿಯ ಭಾಗಕ್ಕೆ ಹೋಗುವ ಬಾಗಿಲನ್ನು ಮುಚ್ಚಲಾಗಿದೆ.

**ಸಂಕ್ರಾತಿ-ಮಾಳ ಮತ್ತು ಗಾಳಿಮಂಟಪ**

ಬೆಟ್ಟದ ಅರ್ಧ ಭಾಗದಲ್ಲಿ ಬೆಟ್ಟ ಹತ್ತುವ ಮೆಟ್ಟಿಲ ಉತ್ತರ ಭಾಗದಲ್ಲಿ ಸಮತಟ್ಟಾದ ಮೈದಾನವಿದೆ. ಇದೆ ಸಂಕ್ರಾತಿ ಮಾಳ, ಜನಪದರ ಪ್ರಕಾರ ಇಲ್ಲಿ ಸಂಕ್ರಾತಿ ಹಬ್ಬದಂದು ಜಾತ್ರೆ ನಡೆಯುತ್ತಿತು. ಹಾಗಾಗಿ ಸಂಕ್ರಾತಿಮಾಳವೆಂದು ಕರೆಯಲಾಗುತ್ತದೆ. ಪಕ್ಕದಲ್ಲಿ ಕಂಚಿನ ಕೊಳವಿದೆ. ಈಗ ಈ ಸ್ಥಳದಲ್ಲಿ ಯಾವುದೇ ಜಾತ್ರೆ ಮಾಡುವುದಿಲ್ಲ. ಬೆಟ್ಟ ಹತ್ತುವವರಿಗೆ ವಿಶ್ರಾಂತಿ ಪಡೆಯುವ ಪ್ರಶಸ್ತ ಸ್ಥಳವಾಗಿದೆ. ಇದೆ ಮಾಳದಲ್ಲಿ ಒಂದು ಮಂಟಪವಿದ್ದು ಇದನ್ನು ಗಾಳಿಮಂಟಪವೆಂದು ಕರೆಯುತ್ತಾರೆ. ಇದರ ವಿಶೇಷವೆಂದರೆ ಬೆಟ್ಟದಲ್ಲಿ ಎಲ್ಲಿಯೂ ಸಿಗದ ತಂಪಾದ ಆಹ್ಲಾದಕರ ಗಾಳಿಯು ರಭಸವಾಗಿ ಬೀಸುತ್ತದೆ.

**ಮದುವಣಿಗ-ಮದುವಣಗಿತ್ತಿ ಕಲ್ಲುಗಳು**

ಕಾಲು ಭಾಗ ಬೆಟ್ಟವನ್ನು ಏರಿದ ನಂತರ ಕಾಣುವ ಚಿಕ್ಕಮಂಟಪವಿದೆ. ಬಲಭಾಗದಲ್ಲಿ ಅನತಿ ದೂರದಲ್ಲಿ ಬೃಹದಾಕಾರದ ಎರಡು ಬಂಡೆಗಳು ನಮ್ಮ ಕಣ್ಣಿಗೆ ಗೋಚರಿಸುತ್ತವೆ. ಇದರಲ್ಲಿ ಸಾಕಷ್ಟು ಜೇನುಗೂಡುಗಳು ಜೋತಾಡುತ್ತಿರುತ್ತವೆ. ಇವು ಪ್ರತಿಧ್ವನಿಸುವ ಬಂಡೆಗಳಾಗಿದ್ದು, ಪರಸ್ಪರ ಅಂಟಿಕೊಂಡಿರುವ ಆ ಬೃಹತ್ ಬಂಡೆಗಳಿಗೆ ಅತಿಮಾನುಷ ಶಕ್ತಿಯಿದೆ. ಎಂದೂ ಅವು ದಂಪತಿಗಳ ಸಂಕೇತ ಎಂದು ಕರೆದಿರುವುದು ಜನಪದರ ಮುಗ್ಧತೆಯ ಧ್ಯೋತಕವಾಗಿದೆ.

**ಮಂಟಿಯಮ್ಮನ ದೇವಸ್ಥಾನ**

ಪಿರಿಯಾಪಟ್ಟಣಕ್ಕೆ ಹೋಗುವ ದಾರಿಯಲ್ಲಿ ಇರುವ ದೇವಸ್ಥಾನ. ಇಲ್ಲಿ ಕಲ್ಲಿನ ವಿಗ್ರಹವನ್ನು ಇಡಲಾಗಿತ್ತು. ಇದು ರಸ್ತೆಯ ಮಧ್ಯ ಭಾಗದಲ್ಲಿದ್ದರಿಂದ ಇದನ್ನು ಇತ್ತೀಚೆಗೆ ತೆರವುಗೊಳಿಸಲಾಗಿದೆ. ಇಲ್ಲಿ ಕುರಿ, ಕೋಳಿಗಳ ಬಲಿಯನ್ನು ಕೊಡಲಾಗುತ್ತಿತ್ತು.

**ಬೆಟ್ಟದಪುರದ ಸಲಿಲಾಖ್ಯ ವಿರಕ್ತಮಠ**

ಹಾಸನ ಬೆಟ್ಟದಪುರ ಮುಖ್ಯ ರಸ್ತೆಯಲ್ಲಿ ಬೆಟ್ಟದಪುರದಿಂದ 1 ಕಿಮೀ ಉತ್ತರಕ್ಕೆ ಬಂದರೇ ಬಲಕ್ಕೆ ಸಿಗುವ ಮಠವೇ 'ವಿರಕ್ತಮಠ' ವಾಗಿದೆ. ಇದು ಪಿರಿಯಾಪಟ್ಟಣದಲ್ಲಿಯೇ ದೊಡ್ಡದಾದ ಮತ್ತು ಪ್ರಖ್ಯಾತ ಮಠವಾಗಿದೆ. ಶಿವೈಕ್ಯರಾದ ಶ್ರೀವೀರಚಿಕ್ಕದೇಶಿಕೇಂದ್ರ ಸ್ವಾಮಿಗಳು 1927 ರ ಮರಣ ಶಾಸನದಲ್ಲಿ ಇದನ್ನು ಸ್ವತಂತ್ರ

ವೀರಕ್ತಮಠ ವೆಂದು ಕರೆದರು. ಹಾಗಾಗಿಯೇ ಇದನ್ನು ಶ್ರೀ ಚಿಕ್ಕವೀರದೇಶಿಕೆಂದ್ರ ಮಠವೆಂತಲೂ ಕರೆಯುತ್ತಾರೆ. ಈ ಮಠವೂ ಪೂರ್ವದಲ್ಲಿ ಚೌಡೇಶ್ವರಿ ಮಠವಾಗಿತ್ತೆಂದೂ, ಈಗಲೂ ಮಠದಲ್ಲಿ ರಕ್ಷಿಸಿ ಇಡಲ್ಪಟ್ಟಿರುವ ಪಳೆಯುಳಿಕೆಗಳು ಸಾಕ್ಷ್ಯಾಧಾರಗಳಾಗಿವೆ. ವಿಜಯನಗರದ ಅರಸರು ಚಂಗಾಳ್ವರನ್ನು ಗೆದ್ದ ಸಂದರ್ಭದಲ್ಲಿ ಮಠವು ವೀರಶೈವರ ಹಿಡಿತಕ್ಕೆ ದಕ್ಕಿರಬಹುದೆಂದು ಕಾಣುತ್ತದೆ. ಈಗ ಇದು ಶಿವಶರಣರ ಮಠವಾಗಿದೆ. ಇದು ಯಡೆಯೂರು ಸಿದ್ದಲಿಂಗೇಶ್ವರ ಸ್ವಾಮಿಗಳ ಸಂಪ್ರದಾಯದ ವಿರಕ್ತ ಪರಂಪರೆಯ ಮಠವಾಗಿದ್ದು ಮಠದಲ್ಲಿ ಸಿದ್ದಲಿಂಗೇಶ್ವರ ಸ್ವಾಮಿಯ ತೋರು ಗದ್ದಿಗೆಯಿದೆ.

ಈ ಮಠವು ಚಂಗಾಳ್ವರು ಜೈನಧರ್ಮವನ್ನು ಬಿಟ್ಟು ವೀರಶೈವ ಧರ್ಮವನ್ನು ಸ್ವೀಕರಿಸಿದ ತರುವಾಯ ಈ ಮಠವು ಚಂಗಾಳ್ವರು ಜೈನಧರ್ಮವನ್ನು ಬಿಟ್ಟು ವೀರಶೈವ ಧರ್ಮವನ್ನು ಸ್ವೀಕರಿಸಿದ ತರುವಾಯ ಅಂದರೇ ಯಡಿಯೂರು ಸಿದ್ದಲಿಂಗೇಶ್ವರರ ಕಾಲದ ತರುವಾಯ ಇಲ್ಲಿ ಬಂದ ವಿರಕ್ತರಿಂದ ಇದು ಪ್ರಾರಂಭವಾಗಿರಬಹುದು. ಬೆಟ್ಟದ ಮೇಲಿದ್ದ ಮಲ್ಲಿನಾಥನ ಗುಡಿಯ ಮಲ್ಲಿಕಾರ್ಜುನ ದೇವಾಲಯವಾದರು. ಈ ಮಠದ ಸಂಬಂಧ ಆ ದೇವಾಲಯಕ್ಕೆ ಹೆಚ್ಚು ಅಂಟಿಕೊಂಡಂತೇ ಕಂಡು ಬರುವುದಿಲ್ಲ. ಚಂಗಾಳ್ವರು ಮೈಸೂರು ಅರಸರಿಗೆ ಅಧೀನರಾದ ನಂತರ ತಮ್ಮ ಆಡಳಿತವನ್ನು ಬಿಟ್ಟುಕೊಟ್ಟ ಮೇಲೆ ಮಲ್ಲಿಕಾರ್ಜುನ ದೇವಾಲಯದ ಪೂಜಾ ಕಾರ್ಯಗಳಿಗೆ ಆಗಮಿಕರನ್ನು ಮೈಸೂರಿನ ಅರಸರು ನೇಮಿಸಿದ ನಂತರ ಮಠದ ಪ್ರಭಾವ ಕುಗ್ಗಿರಬಹುದು.

ಶ್ರೀ ಚಿಕ್ಕವೀರದೇಶಿಕೇಂದ್ರರ ಕಾಲದಲ್ಲಿ ಮಠವು ಉನ್ನತಿಯತ್ತ ದಾಪುಗಾಲು ಹಾಕಿತು. ಮಠದ ಭಕ್ತರ ಸಮೂಹವು ಬೆಳೆಯುತ್ತಲೆ ಸಾಗಿತು. ಇವರು ಸಾಮಾನ್ಯ ಜನರ ಸುಖ ದುಃಖಗಳಿಗೆ ಸೂಕ್ತವಾಗಿ ಸ್ಪಂದಿಸುತ್ತಾ ಹೋದಂತೇ ಹೆಚ್ಚು ಪ್ರವರ್ಧಮಾನಕ್ಕೆ ಬರುತ್ತಾ ಹೋಯಿತು. ಯಾವಾಗಲೂ ಸಮಾಜದ ಉನ್ನತಿಗಾಗಿ ಶ್ರಮಿಸುತ್ತಿದ್ದ ಇವರ ಮನಸ್ಸಿನಿಂದಾಗಿ ಇವರ ಕಾಲದಲ್ಲಿ ಸಮಾಜಕ್ಕೆ ಉಪಕಾರಿಯಾಗಿದ್ದ ಹಲವು ಕಾರ್ಯಗಳು ನೆರವೇರಿದವು. ತಮ್ಮ ಭಿಕ್ಷಾಟನೆಯಿಂದ ಬಂದ ಹಣದಿಂದ ಮೈಸೂರಿನಲ್ಲಿ 1924 ಜನವರಿ 23 ರಂದು ವಿದ್ಯಾರ್ಥಿಗಳಿಗೆ ಉಚಿತವಾದ ಊಟ-ವಸತಿಯನ್ನು ಒಳಗೊಂಡ ವಿದ್ಯಾರ್ಥಿನಿಲಯವನ್ನು ಸ್ಥಾಪಿಸಿದರು. ಕೃಷ್ಣರಾಜನಗರದಲ್ಲಿ

ಶಿವಾನುಭವ ಮಂಟಪವನ್ನು ಸ್ಥಾಪಿಸಿ ಶರಣ ಧರ್ಮ ಪ್ರಸಾರಕ ಕಾರ್ಯಕ್ರಮಗಳಿಗೆ ಉತ್ತೇಜನ ನೀಡಿದರು. ಈ ಜಾಗವನ್ನು 1924 ರಲ್ಲಿ ದಿವಾನರಾಗಿದ್ದ ಸರ್ ಮಿರ್ಜಾ ಇಸ್ಮಾಯಿಲ್ ಇವರಿಗೆ ನೀಡಿದ್ದರು. ಇದಕ್ಕೆ ಎಡೆತೊರೆ, ರಾವಂದೂರು, ಬೆಟ್ಟದಪುರ, ಅತ್ತಿಗೋಡು, ಪಿರಿಯಾಪಟ್ಟಣ ಮತ್ತು ಇನ್ನಿತರ ಕಡೆಗಳಿಂದ ಭಕ್ತರೂ ಇಂದಿಗೂ ಶ್ರದ್ಧಾ ಭಕ್ತಿಯಿಂದ ಇಲ್ಲಿಗೆ ಆಗಮಿಸುವರು. ಶ್ರೀ ಚೆನ್ನವೀರದೇಶಿಕೇಂದ್ರರು ತಮ್ಮ ಮಠವನ್ನು ಸ್ವತಂತ್ರ ವಿರಕ್ತ ಮಠವೆಂದು ಹೇಳಿಕೊಂಡಿದ್ದರು. ಈ ಮಠವು ಟಿ.ನರಸೀಪುರ ತಾಲ್ಲೂಕಿನ ಕುರಹಟ್ಟಿ, ವಿರಕ್ತಮಠ, ಗುಂಡ್ಲುಪೇಟೆ ತಾಲ್ಲೋಕಿನ ಕುರುಬರ ಹುಂಡಿ ವಿರಕ್ತಮಠ, ವಿರಾಜಪೇಟೆ ಕನ್ನಡಮಠ, ಗುಂಡ್ಲುಪೇಟೆಯ ಹಂಗಳದ ವಿದ್ಯಾರ್ಥಿ ನಿಲಯ, ರಾವಂದೂರು ಮಠ ಹೀಗೆ ಹಲವು ಮಠದ ಆಸ್ತಿಗಳನ್ನು ಹೊಂದಿದೆ. ಇವರು ಶಿವೈಕ್ಯರಾದ ಮೇಲೆ ಪೂರ್ವಾಶ್ರಮದ ಮೃತುಂಜಯ ದೇವರಿಗೆ (ಧಾರವಾಡ ಜಿಲ್ಲೆಗೆ ಸೇರಿದ) ಶ್ರೀ ಚನ್ನಬಸವದೇಶಿಕೇಂದ್ರ ರೆಂದು ನಾಮಕರಣ ಮಾಡಿ ಪಟ್ಟಾಭಿಷೇಕ ಮಾಡಲಾಗಿದೆ. ಪ್ರಸ್ತುತ ಈ ವಿರಕ್ತಮಠ ಜಗದ್ಗುರು ಗಳಾದ ಶ್ರೀ ಚನ್ನಬಸವದೇಶಿಕೇಂದ್ರರು ಹಲವು ಶಿಕ್ಷಣ ಸಂಸ್ಥೆಗಳನ್ನು ಹುಟ್ಟುಹಾಕಿ ಮುನ್ನಡೆಸುತ್ತಿದ್ದಾರೆ. ಮಠದಲ್ಲಿ ಆಗಾಗ ಧಾರ್ಮಿಕ ಗೋಷ್ಠಿಗಳನ್ನು ಉಪನ್ಯಾಸಗಳನ್ನು ನಡೆಸಿ ಜ್ಞಾನ ದಾಸೋಹವನ್ನು ನೀಡುತ್ತಿದ್ದಾರೆ. ಶ್ರೀ ಮಠವು ಬೆಟ್ಟದಪುರ, ಪಿರಿಯಾಪಟ್ಟಣ ಮತ್ತು ಬಸವಾಪಟ್ಟಣಗಳಲ್ಲಿ ಪ್ರೌಢಶಾಲೆಗಳನ್ನು , ಹಿಟ್ನಹಳ್ಳಿಯಲ್ಲಿ ಒಂದು ಕಾನ್ವೆಂಟನ್ನು ಹೊಂದಿದೆ, ಮೈಸೂರಿನಲ್ಲಿ ಶುಶ್ರೂಷಕ ತರಬೇತಿ ಕಾಲೇಜೊಂದನ್ನು ಮತ್ತು ವಿದ್ಯಾರ್ಥಿನಿಲಯವನ್ನು ಹೊಂದಿದೆ.

**ಸಾಮಾಜಿಕ ಅರಣ್ಯ**

ಸಿಡ್ಲು ಮಲ್ಲಿಕಾರ್ಜುನ ಬೆಟ್ಟದ ಸುತ್ತಲೂ ಫಲವತ್ತಾದ ಭೂಮಿಯಿದೆ. ಹಾಗಾಗಿ ಇತ್ತಿಚೆಗೆ ಅರಣ್ಯ ಇಲಾಖೆಯು ಬೆಟ್ಟದ ಬುಡದಿಂದ ಅಕೇಷಿಯಾ, ಮುಂತಾದ ಜಾತಿಯ ಗಿಡಗಳನ್ನು ನೆಟ್ಟು ಬೆಳೆಸುವ ಪ್ರಯತ್ನ ಮಾಡುತ್ತಿದೆ. ಹೀಗಾಗಿ ಮಳೆಗಾಲದಲ್ಲಿ ಬೆಟ್ಟವನ್ನು ನೋಡಲೂ ಹಸುರಾಗಿರುತ್ತದೆ. ಈ ಕಾರ್ಯಕ್ರಮವನ್ನು ವಿಸ್ತರಿಸಿ ಬೆಟ್ಟದಲ್ಲಿ ವ್ಯಾಪಕವಾಗಿ ಅನುಷ್ಠಾನ ಮಾಡಿದರೇ ಒಳಿತಾಗಬಹುದು.

**ಶ್ರೀ ಸಿಡ್ಲು ಮಲ್ಲಿಕಾರ್ಜುನಸ್ವಾಮಿ ಬೆಟ್ಟ**

ಬೆಟ್ಟದಪುರದ ಆಗ್ನೇಯ ದಿಕ್ಕಿನಲ್ಲಿರುವ ಬೆಟ್ಟ ಮತ್ತು ಬೆಟ್ಟದ ತುತ್ತ ತುದಿಯಲ್ಲಿರುವ ಮಲ್ಲಿಕಾರ್ಜುನ ಸ್ವಾಮಿ ದೇವಾಲಯ ಸುಪ್ರಸಿದ್ದವಾಗಿದೆ. ಇದು ಸಮುದ್ರ ಮಟ್ಟದಿಂದ 4,389 ಅಡಿ ಎತ್ತರದಲ್ಲಿದೆ. ಕಡಿದಾದ ಬೆಟ್ಟವಾಗಿದ್ದು ಬೆಟ್ಟದ ತುದಿಯನ್ನೇರಲೂ ಸುಮಾರು 3108 ಕಲ್ಲಿನ ಮೆಟ್ಟಿಲುಗಳಿವೆ. ಬೆಟ್ಟದ, ಪ್ರವೇಶ ದ್ವಾರದ ಮಂಟಪವು ವಿಜಯನಗರ ಅರಸರ ಕಾಲದ ಶೈಲಿಯಲ್ಲಿ ಕಟ್ಟಲ್ಪಟ್ಟಿದೆ. ಇಲ್ಲಿ ಮಹಿಷಮರ್ಧಿನಿ, ಭೈರವ ವಿಗ್ರಹಗಳಿವೆ. ಬೆಟ್ಟದ ಸುತ್ತ ಹಸುರಿನ ಮರಗಿಡಗಳ ನಡುವೆ ಕಡಿದಾದ ಮೆಟ್ಟಿಲುಗಳನ್ನು ಏರಬಹುದು. ಪ್ರಕೃತಿಯ ವೈಚಿತ್ರ್ಯಗಳೇ ವಿಚಿತ್ರ ಎಂಬುದಕ್ಕೆ ಬೆಟ್ಟದ ನೆತ್ತಿಯ ಮೇಲೆ ಮಲ್ಲಿಕಾರ್ಜುನ ಸ್ವಾಮಿ ದೇವಾಲಯದ ಕೆಳಭಾಗದಲ್ಲಿರುವ ಕಲ್ಲಿನ ಪೊಟರೆಯ ನಡುವೆ ಇರುವ ನೀರಿನ ಸಂಗ್ರಹ. ಇಲ್ಲಿ ವರ್ಷಪೂರ್ತಿ ನೀರು ಇರುವುದು ಅಚ್ಚರಿ ತರಿಸುತ್ತದೆ. ಈ ಬೆಟ್ಟದ ಮೇಲೆ ಸಿಡಿಲ ಮಲ್ಲಿಕಾರ್ಜುನ ಅಥವಾ ಅನ್ನದಾನಿ ಮಲ್ಲಿಕಾರ್ಜುನ ಎಂದು ಕರೆಸಿಕೊಳ್ಳುವ, ಅಪಾರ ಭಕ್ತಿ ಸಮೂಹವನ್ನೊಂದಿರುವ ಶಿವಲಿಂಗವಿದೆ. ಎರಡು ದೇವಸ್ಥಾನವು ವಿಸ್ತಾರವಾದ ಪ್ರಾಂಗಣವನ್ನು ಹೊಂದಿದೆ, ಪ್ರತ್ಯೇಕ ಗೋಪುರಗಳನ್ನು ಹೊಂದಿರುವ ಮಲ್ಲಿಕಾರ್ಜುನ ಮತ್ತು ಭ್ರಮರಾಂಭೆಯರ ಗರ್ಭ ಗುಡಿಗಳಿವೆ. ಅಂದಾಜಿನ ಪ್ರಕಾರ ಈ ದೇವಸ್ಥಾನದಲ್ಲಿ 201 ಕಂಬಗಳಿವೆ. ದೇವಾಲಯದಲ್ಲಿ ಹಲವು ಶಾಸನಗಳಿವೆ, ದೇಗುಲದ ಪೂರ್ವ ದಿಕ್ಕಿನ ಗೋಡೆಯಲ್ಲಿರುವ ಚಿತ್ರವತ್ತಾದ ಶಾಸನ ಗಮನ ಸೆಳೆಯುತ್ತದೆ. ಭ್ರಮರಾಂಭಾ ದೇವಾಸ್ಥಾನದಲ್ಲಿ ಚೆಂಡಿಕೇಶವ ಎಂಬ ಹೆಸರಿನ ವಿಗ್ರಹವಿದ್ದು, ಮಕ್ಕಳು ಚಂಡಿ ಹಿಡಿದು ಅಳುತ್ತಿದ್ದರೆ ಚಂಡಿಕೇಶ್ವರನಿಗೆ ಚಿಟಿಕೆ ಹೊಡೆದು ನಮ್ಕರಿಸಿ ಹರಕೆ ಹೊತ್ತರೇ ಮಕ್ಕಳು ಸಮಾಧಾನಗೊಳ್ಳುವುವಂತೇ ಎಂಬ ವಿಶೇಷ ನಂಬಿಕೆಯಿದೆ. ದೇವಾಲಯದ ಪೂರ್ವ ಮತ್ತು ಉತ್ತರ ದಿಕ್ಕುಗಳಲ್ಲಿರುವ ಬಂಡೆಗಳ ಮೇಲೆ ಕಂಬಗಳನ್ನು ರಚಿಸಿ ಅವುಗಳ ಮೇಲೆ ಸುಂದರವಾದ ನಂದಿ ವಿಗ್ರಹಗಳನ್ನು ಪ್ರತಿಷ್ಠಾಪಿಸಿದ್ದಾರೆ. ಈ ಬೆಟ್ಟದ ಪ್ರದೇಶದಲ್ಲಿ ಲಿಂಗ ಮತ್ತು ನಂದಿಯ ವಿಗ್ರಹಗಳು ವ್ಯಾಪಕವಾಗಿ ಕಂಡುಬರುತ್ತವೆ. ಹೀಗಾಗಿ ಈ ಪ್ರದೇಶವು ಶೈವ ಧಾರ್ಮಿಕ ಕೇಂದ್ರವಾಗಿತ್ತು ಎನ್ನಬಹುದು.ಪೂರ್ವ ದಿಕ್ಕಿನಲ್ಲಿರುವ ಬಂಡೆಯ ಮೇಲೆ ಹಸು ಮತ್ತು ಹುಲಿಯ ಹೆಜ್ಜೆ ಗುರುತುಗಳಿವೆ. ಇವು ಪುಣ್ಯಕೋಟಿಯ ಕಥೆ ನಡೆದ ಸ್ಥಳವೆಂದು ಸ್ಥಳೀಯರು ಗುರುತಿಸುವರು.

ಬೆಟ್ಟದಲ್ಲಿನ ಮೇಲಿನ ಅನ್ನದಾನಿ ಮಲ್ಲಿಕಾರ್ಜುನ ದೇವಾಲಯದಲ್ಲಿ ಗಿರಿಜೆಯ ಕಲ್ಲಿನ ವಿಗ್ರಹವಿದೆ. ಪೂರ್ವಾಭಿಮುಖವಾಗಿರುವ ದೇವಾಲಯ ಪೂರ್ವದ ಗೋಡೆಯಲ್ಲಿ ಸಿಡಿಲುಕಿಂಡಿಯಿದೆ. ಗರ್ಭ ಗುಡಿಗೆ ನೇರವಾಗಿರುವ ಈ ಕಿಂಡಿಯ ಮುಂಭಾಗದಲ್ಲಿ ಪೂರ್ವಾಭಿಮುಖವಾಗಿ ಬಸವನ ವಿಗ್ರಹವಿದೆ. ಪ್ರತಿ ವರ್ಷವು ಈ ಕಿಂಡಿಯ ಮೂಲಕ ಸಿಡಿಲು ಶಿವನನ್ನು ಅರ್ಜಿಸುತ್ತದೆ ಎಂಬ ಪ್ರತೀತಯಿದೆ. ಕಲಾತ್ಮಕತೆಯ ದೃಷ್ಠಿಯಿಂದ ದೇವಾಲಯಕ್ಕೆ ನಿಲ್ಲಿಸಿರುವ ಕಲ್ಲುಗಳು ಮಾತ್ರ ಕಾಣಸಿಕ್ಕಿವೆ. ಆದರೆ ಸುಂದರವಾದ ಕೆತ್ತನೆಗಳು ಕಂಡು ಬಂದಿರುವುದಿಲ್ಲ.

**ಮಸೀದಿ**

ಪಿರಿಯಾಪಟ್ಟಣ ರಸ್ತೆಯಲ್ಲಿ ಬಲಭಾಗಕ್ಕೆ ಮಸೀದಿಯಿದ್ದು, ಇಲ್ಲಿನ ಹಲವು ಮುಸ್ಲಿಂ ಕುಟುಂಬಗಳು ಇಲ್ಲಿಯೇ ಸೇರಿ ಪ್ರಾರ್ಥನೆಯನ್ನು ಸಲ್ಲಿಸುವರು. ಇಲ್ಲಿ ಮುಸ್ಲಿಂ ಹಬ್ಬಗಳಂದು ಸಡಗರ ಸಂಭ್ರಮ ತುಂಬಿರುತ್ತದೆ.

## ** ಹಬ್ಬಗಳು ಮತ್ತು ಜಾತ್ರೆಗಳು **

ಹಬ್ಬ ಎನ್ನುವ ಪದ 'ಸಂತೋಷ' ಎಂಬಾರ್ಥವನ್ನು ಕೊಡುತ್ತದೆ. ಜನರು ಖುಷಿಯಾಗಿ, ತಿಂದುಡು ಹರ್ಷಿಸುವ ದಿನವೇ ಹಬ್ಬ ಎನ್ನಬಹುದು. ನಿಸರ್ಗವನ್ನು ನಿಯಂತ್ರಿಸುವ ಮತ್ತು ದೇವರನ್ನು ಒಲಿಸಿಕೊಳ್ಳುವ ಸತತ ಪ್ರಯತ್ನಗಳ ಫಲ ಎನ್ನಬಹುದು, ದೇವರ ಬಗೆಗಿನ ಭಯಮಿಶ್ರಿತ ಶ್ರದ್ಧಾಪೂರ್ವಕ ಆಚರಣೆ ಆರಾಧನೆಯೇ ಹಬ್ಬವಾಗಿರಬಹುದು. ಹಬ್ಬಗಳಲ್ಲಿ ಎರಡು ವಿಧಗಳಿವೆ ಸಾಮೂಹಿಕ ಮತ್ತು ಸಾಂಘಿಕ ಹಬ್ಬಗಳು ದೀಪಾವಳಿ, ಯುಗಾದಿ, ಗೌರಿ, ಬಕ್ರೀದ್, ರಂಜಾನ್, ಗುಡ್‌ಪ್ರೈಡೆ ಇತ್ಯಾದಿಗಳು ಸಾಮೂಹಿಕ ಹಬ್ಬಗಳು. ಪಿತೃಪಕ್ಷ, ಜಡೆಮುನಿಹಬ್ಬ, ಹೊಲದಹಬ್ಬ, ಓಕಳಿಹಬ್ಬ ಇವು ಸಾಂಘಿಕ ಹಬ್ಬಗಳು ಈ ಎರಡು ರೀತಿಯ ಹಬ್ಬಗಳು ಇಲ್ಲಿ ಆಚರಣೆಯಲ್ಲಿವೆ.

ಯುಗಾದಿ ಹಬ್ಬ-ಹಿಂದೂ ವರ್ಷದ ಆರಂಭ ಕಾಲವನ್ನು ಯುಗದ ಆದಿ 'ಯುಗಾದಿ' ಎಂತಲೂ ಕರೆಯುತ್ತಾರೆ. ಆ ದಿನ ಮೈಗೆ ಎಣ್ಣೆ ಸ್ನಾನ ಮಾಡಿ ಹೊಸ ಬಟ್ಟೆಗಳನ್ನು ಧರಿಸಿ, ಬೇವು-ಬೆಲ್ಲಗಳನ್ನು ತಿಂದು ಸಡಗರದಿಂದ ಮನೆಯ ಮುಂದೆ ಮಾವು, ಬೇವಿನಸೊಪ್ಪು, ಎಕ್ಕದ ಗಿಡದ ಹೂವಿನಿಂದ ಸಿಂಗರಿಸಿ ದೇವಸ್ಥಾನಗಳಿಗೆ ತೆರಳಿ ವಿಶೇಷ ಪೂಜೆ ಸಲ್ಲಿಸುತ್ತಾರೆ. ಅಂದು ರೈತಾಪಿ ಜನ 'ಹೊನ್ನಾರು' ಕಟ್ಟುವುದರ

ಮೂಲಕ ತಮ್ಮ ಕೃಷಿ ಚಟುವಟಿಕೆಗೆ ಚಾಲನೆ ಕೊಡುತ್ತಾರೆ. ದನ-ಕರುಗಳನ್ನು ತೊಳೆದು ಅಲಂಕಾರ ಮಾಡುತ್ತಾರೆ. ಎಲ್ಲರು ಒಬ್ಬಟ್ಟಿನ ಊಟ ಮಾಡುವರು. ಜನರು ಚೌಕಾಬಾರ ಇತ್ಯಾದಿ ಸ್ಪರ್ಧಾತ್ಮಕ ಒಳಾಂಗಣ ಆಟಗಳನ್ನು ಆಡುತ್ತಾರೆ. ಸಾಯಂಕಾಲ ಚಂದ್ರದರ್ಶನ ಬಹಳ ಪವಿತ್ರವಾದುದು ಎಂದು ನಂಬಿದ್ದಾರೆ.

**ಗೌರಿ ಗಣೇಶನ ಹಬ್ಬ**

ಹೆಣ್ಣು ಮಕ್ಕಳಿಗೆ ವಿಶೇಷವಾದ ಹಬ್ಬ. ಆ ಹಬ್ಬದ ದಿನದಂದು ಹೆಣ್ಣು ಮಕ್ಕಳನ್ನು ತೌರಿಗೆ ಕರೆದು ಕೊಂಡು ಬರುತ್ತಾರೆ. ನಂತರ ಬಾಗಿನ ಶಾಸ್ತ್ರ ನಡೆಯುವುದು. ಊರಿನ ಮುಖ್ಯ ಸ್ಥಳದಲ್ಲಿ ಚಪ್ಪರ ಹಾಕಿ ಗಣಪತಿ ಕೂರಿಸುತ್ತಾರೆ. ಗೌರಿ-ಗಣೇಶನನ್ನು ಕೆರೆಗೆ ಬಿಡುವವರೆಗೂ ಪೂಜಾ ಕಾರ್ಯಗಳು ಮತ್ತು ಮನರಂಜನಾ ಕಾರ್ಯಗಳು ನಡೆಯುತ್ತವೆ. ಶಾವಿಗೆ, ಕಡಬು, ಬಿಳಿಹಿಟ್ಟು, ಕಾಯ್ಹಾಲು, ಸೂಸಲು ಅಡುಗೆಯ ವಿಶೇಷವಾಗಿರುತ್ತದೆ.

**ದೀಪಾವಳಿ ಹಬ್ಬ**

ದೀಪಾವಳಿಯು ಬಹು ಸಡಗರದ ಹಬ್ಬ. ಬೆಟ್ಟದಪುರಕ್ಕಂತೂ ಈ ಹಬ್ಬ ಎಲ್ಲಿಲ್ಲದ ಮೆರಗನ್ನ ತಂದು ಕೊಟ್ಟಿದೆ. ಇಲ್ಲಿಯ ಜನ ಗ್ರಾಮ್ಯ ಭಾಷೆಯಲ್ಲಿ 'ದೀವಳ್ಗೆ' ಎಂದು ಕರೆಯುತ್ತಾರೆ. ದನಕರುಗಳು ಹುಲುಸಾಗಿ ಬೆಳೆದ ಮೇವನ್ನು ತಿಂದು ಕೊಬ್ಬಿರುತ್ತವೆ. ಹಾಗಾಗಿ 'ಉಗಾದಿಲಿ ಆಳ್ ಕೆಣಕ್ ಬ್ಯಾಡ , ದೀವಳ್ಗೆಲಿ ದನ ಕೆದಕ್ ಬ್ಯಾಡ' ಎಂಬ ಗಾದೆ ಮಾತಿದೆ. ಬಲಿಪಾಡ್ಯಮಿಯ ದಿನ ಸಗಣಿ ಉಂಡೆಯನ್ನು ಮಾಡಿ ಅದರಲ್ಲಿ ಚೆಂಡು ಹೂ ಸಿಕ್ಕಿಸಿ ಮನೆ ಮುಂದೆ ಜಗುಲಿ, ಬಾಗಿಲ ನಿಲಗಳ ಮೇಲೆ ಇಡುತ್ತಾರೆ. ತಿಪ್ಪೆಯನ್ನು ಕೂಡಾ ತಿಪ್ಪಮ್ಮ ಎಂಬ ಹೆಸರಿನಿಂದ ಪೂಜಿಸಲಾಗುತ್ತದೆ. ಶ್ರೀ ಕೃಷ್ಣನು ನರಕಾಸುರನನ್ನು ಕೊಂದ ದಿನದ ನೆನಪೇ ನರಕ ಚತುರ್ದಶಿ. ಅತ್ಯಂತ ದುಷ್ಟನಾಗಿದ ನರಕಾಸುರನ ಉಪಟಳವನ್ನು ನಿಗ್ರಹಿಸಿ ಲೋಕಕ್ಷೇಮಕ್ಕಾಗಿ ಅವತರಿಸಿದ ಪುರುಷ ಶ್ರೀ ಕೃಷ್ಣ. ನರಕಾಸುರ ತಾಯಿಯ ಅಪ್ಪಣೆಯ ಮೇರೆಗೆ ನರಕಾಸುರನ್ನು ಎಲ್ಲರೂ ಪೂಜಿಸುವ, ನೆನಪಿಡುವ ರೀತಿಯಲ್ಲಿ ಕೃಷ್ಣನು ಈ ಹಬ್ಬವನ್ನು ಸ್ಥಾಯಿಗೊಳಿಸುತ್ತಾನೆ. ಈ ದಿನದ ಸವಿನೆನಪು ನರಕಚತುರ್ದಶಿ, ದೇವಸ್ಥಾನದ ಮೈದಾನದಲ್ಲಿ ನರಕಾಸುರ ಚಿತ್ರ ಬರೆದು ಅದನ್ನು ವಧಿಸುವ ಶಾಸ್ತ್ರ ಮಾಡಿ ಎಲ್ಲರಿಗೂ ಎಳನೀರು ವಿತರಿಸುತ್ತಾರೆ.

ಲಕ್ಷ್ಮೀ ಕೃಪೆಗೆ ಒಳಗಾಗಲು ಹಂಬಲಿಸುವುದು ಬಹುಜನರ ಸಾಮಾನ್ಯ ಗುರಿಯಾಗಿರುತ್ತದೆ. ಲಕ್ಷ್ಮೀಕಟಾಕ್ಷವೆಂದರೆ ಅದು ನಿಜವಾದ ಸೌಭಾಗ್ಯ. ಈ ಮಹಾಲಕ್ಷ್ಮೀಯ ಅನುಗ್ರಹ ಎಲ್ಲರಿಗೂ ಬೇಕು ಕಗ್ಗತ್ತಲನ್ನು ತೊಡೆದು ಬೆಳಕನ್ನು ಕಾಣುವುದು ಸೃಷ್ಟಿವಿಕಾಸದ ರಹಸ್ಯವು ಹೌದು. ಅಂತಯೇ ಸೌಭಾಗ್ಯ ಶ್ರೀಯನ್ನು ಪಡೆಯಲು ದೀಪಾವಳಿಯ ಆಚರಣೆಯಲ್ಲಿ ಲಕ್ಷ್ಮೀ ಪೂಜೆ ಮಾಡಲಾಗುತ್ತದೆ. ವ್ಯಾಪಾರಸ್ಥರು ಇದನ್ನು ಹೆಚ್ಚು ಅದ್ದೂರಿಯಾಗಿ ಆಚರಿಸುವರು. ಬಲಿಚಕ್ರವರ್ತಿಯ ದಾನವೀರ ಗುಣದ ಸವಿನೆನಪು ದಿನವೇ ಬಲಿಪಾಡ್ಯಮಿ. ಶ್ರೀ ವಿಷ್ಣುವಾಮನನ ಅವತಾರದಲ್ಲಿ ಬಲಿ ಚಕ್ರವರ್ತಿಯ ಬಳಿ ಬಂದು ಮೂರು ಹೆಜ್ಜೆ ಭೂಮಿಯನ್ನು ದಾನವನ್ನು ಬೇಡುವುದರ ಮೂಲಕ, ಅವನನ್ನು ಮೆಟ್ಟಿ ಪಾತಾಳಕ್ಕೆ ತುಳಿದನು. ಬಲಿಯ ದಾನ ಗುಣಕ್ಕೆ ಮೆಚ್ಚಿ "ವರವನ್ನು ಬೇಡಿಕೊ" ಎಂದು ಕೇಳಿದಾಗ, ಬಲೀಂದ್ರನು "ನನ್ನ ರಾಜ್ಯದಲ್ಲಿ ಯಾರು ಮೂರು ದಿನ ದೀಪದಾನ ಮಾಡುತ್ತಾರೊ ಅವರ ಮನೆಯಲ್ಲಿ ನಿನ್ನ ಸಹಧರ್ಮಿಣಿ ಮಹಾಲಕ್ಷ್ಮೀ ಸ್ಥಿರವಾಗಲಿ" ಎಂದು ಬೇಡಿದನು. ಇದಕ್ಕೆ ಹರಿಯು ಅನುಗ್ರಹ ನೀಡಿದನು.

ದೀಪಾವಳಿ ಹಬ್ಬದಿನದಂದು ಬೆಟ್ಟದಪುರದಲ್ಲಿ ನಡೆಯುವ ಪಂಜಿನ ಮೆರವಣಿಗೆಯು ಅತ್ಯಾಕರ್ಷಕವಾದುದು. ಅಮಾವಾಸ್ಯೆಯಂದು ರಾತ್ರಿ ಮಲ್ಲಿಕಾರ್ಜುನ ದೇವಾಲಯದಲ್ಲಿರುವ ಪಂಚಲೋಹದ ಮೆರೆಯುವ ದೇವರ ವಿಗ್ರಹಗಳನ್ನು ಬೆಟ್ಟಕ್ಕೆ ತೆಗೆದುಕೊಂಡು ಹೋಗಿ, ಪೂಜೆ, ಮಹಾಮಂಗಳಾರತಿ ಮಾಡುತ್ತಾರೆ. ಅನಂತರ ಪಾಡ್ಯದ ದಿನ ಬೆಳಗಿನ ಜಾವ ಬೆಟ್ಟದಿಂದ ಪಂಜಿನ ಸಮೇತ ಮೆರೆಯುವ ದೇವರುಗಳನ್ನು ಕೆಳಕ್ಕೆ ಹೊತ್ತು ತರುತ್ತಾರೆ. ಬೆಟ್ಟದ ಬುಡದ ಗೋಪುರದ ಬಳಿ ಮಂಟಪ ನಿರ್ಮಿಸಿ ಮಂಗಳಾರತಿ ಸಲ್ಲಿಸಿ ಭಕ್ತರು ಕೃತಾರ್ಥರಾಗುತ್ತಾರೆ. ಸಾವಿರಾರು ಭಕ್ತರು ಪಂಜು ಹಿಡಿದು ಕೈಂಕರ್ಯ ನೆರವೇರಿಸುತ್ತಾರೆ. ಒಟ್ಟು ಪ್ರದಕ್ಷಣೆ 12 ಮೈಲು ಆಗುತ್ತದೆ. ಮೂರನೆಯ ದಿನ ಬೆಳಗಿನ ಜಾವದವರೆಗೂ ಸಾಗುತ್ತದೆ. ಇದು ಬೆಟ್ಟ ಹತ್ತಲು ಆಗಾದ ಸುತ್ತಲಿನ ಅಶಕ್ತ ಭಕ್ತಾದಿಗಳಿಗೆ ದೇವರ ದರ್ಶನ ಮಾಡಿಸುವ ಸದುದ್ದೇಶವನ್ನು ಹೊಂದಿದೆ.

ಪಂಜಿನ ಮೆರವಣಿಗೆ ಅಥವಾ ದೀವಟಿಗೆ ಸೇವೆಯಲ್ಲಿ ತಮ್ಮ ಕೆಲಸ ಕಾರ್ಯಗಳಿಗೆ ಹರಸಿಕೊಂಡ ಭಕ್ತರು ಮತ್ತು ಉತ್ಸಾಹಿ ಯುವಕರು ಭಾಗವಹಿಸುತ್ತಾರೆ.

ಇಲ್ಲಿನ ಪೂಜೆ ಬ್ರಾಹ್ಮಣರಿಗೂ, ಬೆಟ್ಟದ ಸುತ್ತ ಹೊತ್ತು ತಿರುಗುವ ಕೆಲಸ ಉಪ್ಪಾರ ಜನಾಂಗಕ್ಕೆ ಮೀಸಲಾದುದು. ತುಂಗಾ ಹಾಗೂ ಕುಡಕೂರುಗಳ ಉಪ್ಪಾರರು ಸಕ್ರಿಯವಾಗಿ ಪಾಲ್ಗೊಳ್ಳುವರು.

ಈ ಉತ್ಸವವು ಬೆಟ್ಟದ ಸುತ್ತಲೂ ಇರುವ ಊರುಗಳಲ್ಲಿ ಸಾಗಿ, ಮತ್ತೆ ಬೆಟ್ಟದಪುರಕ್ಕೆ ಬರುವ ವೇಳೆಗೆ ಮಧ್ಯರಾತ್ರಿಯಾಗಿರುತ್ತದೆ. ರಾತ್ರಿಯ ವೇಳೆಯಲ್ಲಿ ಪಂಜನ್ನು ಹಿಡಿದು ಪ್ರದಕ್ಷಿಣೆ ನೋಡುವುದೇ ಕಣ್ಣಿಗೆ ಹಬ್ಬ. ದೇವರನ್ನು ಮೂಲ ಸ್ಥಾನಕ್ಕೆ ಇಟ್ಟ ಮೇಲೆ, ದೇವರ ಜೊತೆ ದೀವಟಿಗೆ ಹಿಡಿದು ಹೊತ್ತುಕೊಂಡು ಬಂದವರಿಗೆ ಪ್ರಸಾದ ಅನ್ನ ಸಂತರ್ಪಣೆ ನಡೆಯುತ್ತದೆ. ಅಲ್ಲಿಗೆ ದೀಪಾವಳಿ ಹಬ್ಬ ಪಂಜಿನ ಮೆರವಣಿಗೆ ಮುಗಿಯುತ್ತದೆ. ದೀವಟಿಗೆ ಸೇವೆಯು ಕೊನೆಗೊಳ್ಳುತ್ತದೆ.

**ಸಂಕ್ರಾತಿ ಹಬ್ಬ**

ಸುಗ್ಗಿಯ ಹಬ್ಬವೆಂದೇ ಕರೆಯುವ ಸಂಕ್ರಾತಿಯನ್ನು ಇಲ್ಲಿ ವಿಜೃಂಭಣೆಯಿಂದ ಆಚರಿಸಲಾಗುತ್ತದೆ. ಸೂರ್ಯನು ಮಕರ ಸಂಕ್ರಾತಿ ವೃತ್ತದಿಂದ ಕರ್ಕಾಟಕ ವೃತ್ತದೆಡೆಗೆ ಚಲಿಸುವ ದಿನವಾಗಿದೆ. ಈ ಹಬ್ಬದಲ್ಲಿ ಎಳ್ಳು, ಬೆಲ್ಲ, ಕೊಬ್ಬರಿ, ಕಬ್ಬು ಇವೆಲ್ಲವುಗಳನ್ನು ಪರಸ್ಪರ ಮನೆಗೆ ಹಂಚುತ್ತಾರೆ. ಮಕ್ಕಳಿಗೆ ಅಲಂಕಾರ ಮಾಡಿ ಹಸೆಯ ಮೇಲೆ ಕೂರಿಸುವರು. ಇದು ಭವಿಷ್ಯಕ್ಕೆ ಒಳ್ಳೆಯದೆಂಬ ನಂಬಿಕೆಯಿದೆ.

**ಶಿವರಾತ್ರಿ ಹಬ್ಬ**

048769

ಶೈವರಿಗೆ ದೊಡ್ಡ ಹಬ್ಬ. ಶಿವನ ಭಕ್ತರು ನಿಷ್ಠೆಯಿಂದ ಈ ಹಬ್ಬವನ್ನು ಆಚರಿಸುತ್ತಾರೆ. ಬಹುತೇಕ ಜನರು ದಿನವಿಡೀ ಉಪವಾಸವಿದ್ದು, ರಾತ್ರಿ ಪೂರಾ ಶಿವನ ಪೂಜೆ ಮಾಡುತ್ತಾ, ಜಾಗರಣೆ ಮಾಡುತ್ತಾರೆ. ಉಪ್ಪಿಟ್ಟು, ತಂಬಿಟ್ಟು ಈ ಹಬ್ಬದ ವಿಶೇಷ ಅಡುಗೆ ಹುರಿದ ಅಕ್ಕಿಹಿಟ್ಟಿಗೆ ಹುರಿಕಡಲೆ, ಕಡ್ಲೆಬೀಜ, ಕಾಯಿ ಎಳ್ಳು ಎಲ್ಲವನ್ನು ಹಾಕಿ ತಂಬಿಟ್ಟು ತಯಾರಿಸಿ ನೈವೇದ್ಯ ಮಾಡುತ್ತಾರೆ. ಹುಳಿಯವಲಕ್ಕಿ, ಕೋಸಂಬರಿ, ಪಾನಕವನ್ನು ಹಗಲೆಲ್ಲಾ ವಿತರಿಸುತ್ತಾರೆ.

ಬೆಟ್ಟದಲ್ಲಿರುವ ಮಲ್ಲಿಕಾರ್ಜುನ ಸ್ವಾಮಿ ದೇವಸ್ಥಾನ ಮತ್ತು ಊರಿನ ದೇವಸ್ಥಾನಗಳಲ್ಲಿ ವಿಶೇಷ ಪೂಜೆ, ಭಜನೆಯನ್ನು ನಡೆಸುತ್ತಾರೆ, ಮಾರನೇ ದಿನ ಸಾಮೂಹಿಕವಾಗಿ ಊಟ ಮಾಡುವ ಪದ್ಧತಿಯಿದೆ ಇದಕ್ಕೆ 'ಪಾರಾಣಿ' ಎನ್ನುವರು.

**ಪಿತೃಪಕ್ಷ**

ಮನೆತನದ ಸಂಪ್ರದಾಯಕ್ಕೆ ತಕ್ಕಂತೆ ಆಚರಿಸುವ ಹಬ್ಬ. ಪ್ರತಿವರ್ಷ ಸ್ವರ್ಗದಲ್ಲಿರುವವರಿಗೆ ಅನ್ನಹಾರ ನೀಡಲು ಅವರ ಹೆಸರಿನಲ್ಲಿ ಅನ್ನ ಸಂತರ್ಪಣೆ ಮಾಡುವುದು ನಡೆಯುತ್ತದೆ. ಕೆಲವರು ಮಹಾಲಯ ಅಮಾವಾಸ್ಯೆಯಂದು, ಕೆಲವರು ಆಯುಧಪೂಜೆಯಂದು, ಮತ್ತೆ ಕೆಲವರು ದೀಪಾವಳಿ ಹಬ್ಬದಂದು ಈ ಆಚರಣೆ ಮಾಡುತ್ತಾರೆ. ಇದರಲ್ಲಿ ಮಾಂಸಹಾರ, ಸಸ್ಯಹಾರ ಎಂಬ ಎರಡು ಬಗೆಗಳಿರುತ್ತವೆ. ಅವರವರ ಸಂಪ್ರದಾಯಕ್ಕೆ ಅನುಗುಣವಾಗಿ ಅವುಗಳನ್ನು ಮಾಡುತ್ತಾರೆ.

ಎಲ್ಲಾ ತರಹದ ತಿಂಡಿ, ಊಟವನ್ನು ಎಡೆಗೆ ಇಟ್ಟು ಕಳಸ ಪೂಜಿಸಿ ಹೊಸಬಟ್ಟೆಯಿಟ್ಟು, ಹಣ್ಣು, ಹಂಪಲುಗಳನ್ನು ಇಟ್ಟು ಪೂಜಿಸುತ್ತಾರೆ. ನಂತರ ಎಲ್ಲರೂ ಹೊರ ನಡೆದು ಸ್ವಲ್ಪ ಸಮಯದ ನಂತರ ಬಂದು ಉಂಡು ಹೋದರು ಎಂದು ತಿಳಿಯುತ್ತಾರೆ. ಆಮೇಲೆ ನೆಂಟರಿಷ್ಟರೊಂದಿಗೆ ಊಟೋಪಚಾರ ಮಾಡುತ್ತಾರೆ.

**ಮಾರಿ ಹಬ್ಬ**

ದಕ್ಷಿಣ ಭಾರತದಾಂದ್ಯತ ಪ್ರಚಲಿತವಿರುವ ಹಬ್ಬಗಳಲ್ಲಿ ಪ್ರಸಿದ್ದವಾದದ್ದು ಮಾರಿಹಬ್ಬ. ಗ್ರಾಮದೇವತೆಯಾಗಿ ರೋಗದೇವತೆಯಾಗಿ ಭಯ, ಭಕ್ತಿಯಿಂದ ಪೂಜಿಸುತ್ತಾರೆ. ಊರಿಗೆ ಕ್ಷಾಮ ಬರದಂತೇ ಪ್ಲೇಗು, ದಡರಾ ಮುಂತಾದ ಕಾಯಿಲೆಗಳು ತಡೆಯುವ ದೇವತೆ ಎಂಬ ಅಪಾರವಾದ ನಂಬಿಕೆ ಜನರಲ್ಲಿದೆ.

ಬೆಟ್ಟದಪುರದ ಸುತ್ತಮುತ್ತಲಿನ ಜನರಲ್ಲಿ ಪ್ರಚಲಿತವಾದ ಮಾರಮ್ಮನ ಜನಪದ ಕಥೆಗಳ ಪ್ರಕಾರ, ಮಾರಮ್ಮ ಬ್ರಾಹ್ಮಣರ ಹುಡುಗಿ. ಅವಳನ್ನು ತಲೆಪೇಟರಾಯ ಎಂಬ ದಲಿತರ ಹುಡುಗ ಮೋಸದಿಂದ ಮದುವೆಯಾದ.ಕೆಲವು ದಿನಗಳ ನಂತರ ಸತ್ಯಾಂಶ ತಿಳಿದು ಗಂಡನನ್ನು ಮನೆಯಿಂದ ಹೊರಗೆ ತಳ್ಳಿ ಬಾಗಿಲು ಹಾಕಿಕೊಂಡಳು, ಹೆಂಡತಿ ಬಾಗಿಲು ತೆರೆಯಲೆಂದು ಆತ ಮನೆಯ ಮುಂದೆ ಕೋಣ ಮತ್ತು ಕುರಿಗಳನ್ನು ಕಡಿಯುತ್ತಿದ್ದ, ಒಮ್ಮೆ ನೋಡಲೆಂದು ಬಾಗಿಲು ತೆರೆದ ಮಾರಮ್ಮನ ಹಣೆಯ ಮೇಲೆ ರಕ್ತಹಾರಿ ಅದೇ ಅಗಲವಾದ ಕುಂಕುಮವಾಯಿತು. ನಂತರ ಬಾಗಿಲು ಹಾಕಿಕೊಂಡು ಆಕೆ ಗಂಡನ್ನನು ಇನ್ನೂ ಬಳಿಗೆ ಕೂಡಿಲ್ಲ, ಆತ ಹೊರಗೆ ಕಾಯುತ್ತಿದ್ದಾನೆ. ಈ ಕಾರಣದಿಂದ ಮಾರಮ್ಮ ಮತ್ತು ತಲೆಪೊಟರಾಯನ ಗುಡಿ ಅಕ್ಕಪಕ್ಕದಲ್ಲಿಯೇ ಇರುತ್ತವೆ. ಸಾಮಾನ್ಯವಾಗಿ ಎಲ್ಲಾ ಗ್ರಾಮಗಳಲ್ಲೂ ಹೀಗೆಯೇ ಇರುತ್ತದೆ.

ಹೀಗೆ ಕೋಪಗೊಂಡ ಮಾರಮ್ಮನನ್ನು ಒಲಿಸಿಕೊಳ್ಳುವ ಸಲುವಾಗಿ ಪ್ರತಿವರ್ಷ ಹಬ್ಬಮಾಡಿ. ಕುರಿ, ಆಡು, ಕೋಳಿ ಬಲಿಕೊಡುತ್ತಾರೆ. ಇಲ್ಲಿನ ವಿಶೇಷವೆಂದರೇ ತಂಬಿಟ್ಟು, ಎಳನೀರು ಇವುಗಳನ್ನು ಇಟ್ಟು ಮಾರಮ್ಮನಿಗೆ ತಂಪಿನ ನೈವೇದ್ಯ ಮಾಡುವುದು, ಅನಂತರ ಬಲಿ ಕೊಡುತ್ತಾರೆ. ಗ್ರಾಮಕ್ಕೆ ಬರಗಾಲ ಬರುವುದಿಲ್ಲ, ಭಯಂಕರ ಖಾಯಿಲೆಗಳಾದ ಪ್ಲೇಗು, ಸಿಡಿಲು, ದಡರಾ, ಕಾಲರಾ ಕಾಣಿಸಿಕೊಳ್ಳುವುದಿಲ್ಲ ಎಂಬ ನಂಬಿಕೆ ಇದೆ.

ಇದೇನೆ ಇದ್ದರೂ ಮಾರಮ್ಮನ ಮದುವೆಯ ಹಿಂದೆ ಇರುವ ಜನಪದ ಕಥೆ ಅದ್ಭುತವಾದದ್ದು. ಒಬ್ಬ ದಲಿತ ಅಷ್ಟು ಬುದ್ಧಿವಂತನಾಗಿ ವಿದ್ವತ್ತನ್ನು ಪಡೆದುಕೊಂಡ ಬ್ರಾಹ್ಮಣ ಕನ್ಯೆಯನ್ನು ವಿವಾಹವಾದ ಸಾದೃಶ್ಯ ಇಂದಿಗೂ ಪ್ರಸ್ತುತವಾದುದು, ಜನಪದ ಕಲ್ಪನಾಶಕ್ತಿ ಇಂಥ ಕಥೆಗಳಲ್ಲಿ ತನ್ನ ಮೇರು •ಸದೃಶತೆಯನ್ನು ಮೆರೆಯುತ್ತದೆ ಎಂದರೇ ತಪ್ಪಾಗಲಾರದು. ಒಂದು ಸಮಾಜದ ವಿಧಿ–ನಿಷೇಧಗಳನ್ನು ಮೀರುವ ಸಾಧ್ಯತೆಗಳು ಜಾನಪದದಲ್ಲಿ ಕಾಣಿಸುವುದು ಸಹಜ.

**ಶಾಂತವೀರಮ್ಮನ ಹಬ್ಬ**

ಪ್ರತಿವರ್ಷ ಕಾರ್ತಿಕ ಮಾಸದಲ್ಲಿ ಗ್ರಾಮದೇವತೆಯ ಹಬ್ಬ ಮಾಡುತ್ತಾರೆ. ಇಲ್ಲಿನ ಗ್ರಾಮ ದೇವತೆ ಶಾಂತವೀರಮ್ಮ ಅಥವಾ ದೊಡ್ಡಮ್ಮ ಪಿರಿಯಾಪಟ್ಟಣ ತಾಲ್ಲೂಕಿನಾದ್ಯಂತ ದೊಡ್ಡ ಗ್ರಾಮದೇವತೆ. ಪ್ರತಿ ಗ್ರಾಮದಲ್ಲಿಯೂ ಇದೆ.

ಗ್ರಾಮದ ಸಂತೆಮಾಳದಲ್ಲಿ ಶಾಂತವೀರಮ್ಮ ಗುಡಿಯಿದೆ. ವರ್ಷಪ್ರತಿ ಹಬ್ಬ ಮಾಡುವ ಮುಂಚೆ ಊರಿನವರೆಲ್ಲ ಸೇರಿ ಹಬ್ಬ ಮಾಡುವ ದಿನ ನಿರ್ಧರಿಸಿ, ಹಬ್ಬದ ನಿರ್ವಹಣೆಗಾಗಿ ಪ್ರತಿಯೊಂದು ಮನೆಯವರಿಂದಲೂ 'ವರಿ' ರೂಪದಲ್ಲಿ ಹಣ ನಿರ್ಧಾರ ಮಾಡಿ, ಸಂಗ್ರಹ ಮಾಡುತ್ತಾರೆ. ಹಬ್ಬದ ದಿನ ಗ್ರಾಮದ ಎಲ್ಲಾ ಜನರು ಮನೆಗಳಿಗೆ ತಳಿರು ತೋರಣಗಳಿಂದ ಸಿಂಗರಿಸಿ ಬೀದಿಗಳನ್ನು ರಂಗೋಲಿಗಳಿಂದ ಅಲಂಕಾರ ಮಾಡುತ್ತಾರೆ.

ಹಬ್ಬದಂದು ಎಲ್ಲಾ ಮನೆಗಳಿಂದಲೂ ಗುಡಿಗೆ ತಂಬಿಟ್ಟಿನ ನೈವೇದ್ಯವನ್ನು ತರುತ್ತಾರೆ. ಹಸಿ ಅಕ್ಕಿ ಹಿಟ್ಟಿನಿಂದ ಮಾಡಿದ ತಂಬಿಟ್ಟಿಗೆ ದೀಪಗಳನ್ನು ಇಟ್ಟು ಹೂಗಳಿಂದ ಅಲಂಕಾರ ಮಾಡುತ್ತಾರೆ. ಇದು ಮಾರಿ ಹಬ್ಬದ ಆಚರಣೆಯಂತೇ ತೋರುತ್ತದೆ. ಈ ಎರಡು ಹಬ್ಬಗಳನ್ನು ಒಂದೇ ದಿನ ಮಾಡುವುದು ಇದಕ್ಕೆ ಕಾರಣ ಇರಬಹುದು,

ತಂಬಿಟ್ಟಿನ ನೈವೇದ್ಯ ಅರ್ಪಿಸಿ ಪೂಜೆ ಮಂಗಳಾರತಿ ಮಾಡುತ್ತಾರೆ. ಮಾರಮ್ಮನಿಗೆ ಬಲಿ ಅರ್ಪಿಸಿದ ನಂತರ ಇಲ್ಲಿ ಪ್ರಾಣಿಗಳನ್ನು ಬಲಿಕೊಡುತ್ತಾರೆ. ನಂತರ ಹಬ್ಬಕ್ಕೆಂದು ಬಂದ ನೆಂಟರಿಷ್ಟರಿಗೆ ಊಟೋಪಚಾರ ಮಾಡಿಕೊಡಲಾಗುತ್ತದೆ.

**ಮಲ್ಲಯ್ಯನ ಜಾತ್ರೆ**

ಅನ್ನದಾನಿ ಸಿಡಿಲು ಮಲ್ಲಿಕಾರ್ಜುನ ಸ್ವಾಮಿಯ ಬ್ರಹ್ಮರಥೋತ್ಸವವೇ ಮಲ್ಲಯ್ಯನ ಜಾತ್ರೆ. ಈ ಜಾತ್ರೆ ಮೈಸೂರು ಜಿಲ್ಲೆಯಲ್ಲಿಯೇ ಪ್ರಸಿದ್ಧವಾದದ್ದು. ಜಾನುವಾರುಗಳ ದನದ ಜಾತ್ರೆ ನಡೆಯುತ್ತದೆ. ಈ ಜಾತ್ರೆಗೆ ಸುತ್ತಮುತ್ತಲಿನ ಗ್ರಾಮದ ರೈತರ ಜೊತೆಗೆ ಹಾಸನ ಭಾಗದ ಜನರು ರಾಸುಗಳನ್ನು ಮಾರಾಟಕ್ಕೆ ತರುತ್ತಾರೆ. ಸಾಮಾನ್ಯವಾಗಿ ರಾಸುಗಳ ಜಾತ್ರೆಯು ಫೆಬ್ರವರಿ ತಿಂಗಳಲ್ಲಿ ನಡೆಯುತ್ತದೆ. ಇಲ್ಲಿನ ರಾಸುಗಳಿಗೆ ಬಹು ಬೇಡಿಕೆಯಿದೆ. ಮೈಸೂರು ಭಾಗದ ಜಿಲ್ಲೆಯ ಜೊತೆಗೆ ಶಿವಮೊಗ್ಗ, ಮಂಡ್ಯ, ದಾವಣಗೆರೆ, ಹಾಸನಗಳಿಂದಲೂ ರಾಸುಗಳನ್ನು ಕೊಳ್ಳಲೂ ಬರುತ್ತಾರೆ. ಹೀಗಾಗಿ ರಾಸುಗಳ ಅದ್ದೂರಿಯಾದ ಕೊಳ್ಳುವಿಕೆ–ಮಾರಾಟ ಮಾಡುವಿಕೆ ನಡೆಯುತ್ತದೆ. ಹಿಂದೆ ಮಲ್ಲಯ್ಯನ ಜಾತ್ರೆಯ ರಥೋತ್ಸವ ನಡೆದು ಪ್ರಸಾದವನ್ನು ಪಡೆಯುವವರೆಗೂ ದನದಜಾತ್ರೆಯು ಇರುತ್ತಿತ್ತು. ಇತ್ತೀಚೆಗೆ ರಥೋತ್ಸವದ 8–10 ದಿನಗಳ ಮೊದಲೆ ರಾಸುಗಳ ಜಾತ್ರೆಯು ಅಂತ್ಯಗೊಳ್ಳುತ್ತದೆ. ಹಿಂದೆ ಮುಜರಾಯಿ ಇಲಾಖೆಯು ಪ್ರತಿ ರಾಸುವಿಗೆ ಶುಲ್ಕ ವಿಧಿಸುತ್ತಿತು. ಇತ್ತೀಚೆಗೆ ಶುಲ್ಕ ರಹಿತವಾದ ಮಾರಾಟಕ್ಕೆ ಅನುಕೂಲ ಮಾಡಿಕೊಡಲಾಗಿದೆ. ಜಾತ್ರೆಯಲ್ಲಿನ ಉತ್ತಮ ರಾಸುಗಳಿಗೆ ಪಶುವೈದ್ಯ ಇಲಾಖೆಯಿಂದ ಬಹುಮಾನ ನೀಡಲಾಗುತ್ತದೆ. ಬಂಡಾರಗಟ್ಟೆ, ತಾವರೆಕೆರೆ, ಹಳೆಕೆರೆಗಳು ಜಾನುವಾರುಗಳಿಗೆ ಕುಡಿಯಲು, ಮೈತೊಳೆಯಲು ನೀರಿನ ಆಸರಗಳಾಗಿವೆ.

ಹೀಗೆ ಇಂದಿಗೂ ತನ್ನ ಪ್ರಖ್ಯಾತಿಯನ್ನು ಉಳಿಸಿಕೊಂಡು ರಾಜ್ಯದಲ್ಲಿ ಹೆಸರು ವಾಸಿಯಾದ ರಾಸುಗಳ ಜಾತ್ರೆಯಾಗಿದೆ ಎನ್ನಬಹುದು.

**** ಬ್ರಹ್ಮ ರಥೋತ್ಸವ ****

ಬೆಟ್ಟದಪುರದಲ್ಲಿ ನಡೆಯುವ ಬ್ರಹ್ಮ ರಥೋತ್ಸವವು ಸಂಪ್ರದಾಯದಂತೆ ಬಹು ಹಿಂದಿನಿಂದಲೂ 9 ದಿನಗಳು ನಡೆದು ಕೊನೆಯ ದಿನ ತೆಪ್ಪೋತ್ಸವದೊಂದಿಗೆ ಅಂತ್ಯವಾಗುತ್ತದೆ.

ಭ್ರಮರಾಂಬ ಮತ್ತು ಮಲ್ಲಿಕಾರ್ಜುನರಿಗೆ ಮದುವೆ ಮಾಡಿಸುವುದೇ ಈ ಆಚರಣೆಯ ಬಹು ಮುಖ್ಯ ವಿಶೇಷ. ಹಿಂದೆ ಈ ಆಚರಣೆಗಳು ವಾರಗಟ್ಟಲೆ ನಡೆಯುತ್ತಿದ್ದವು. ಇಂದು ಗಿರಿಜಾಕಲ್ಯಾಣ ರಥೋತ್ಸವ, ತಪ್ಪೋತ್ಸವ ಆಚರಣೆಗಳು ಮುಖ್ಯವಾಗಿದ್ದು ಉಳಿದವು ಗೌಣವಾಗಿವೆ. ಈ ಆಚರಣಾ ಸಂಪ್ರದಾಯಗಳನ್ನು ಈ ಮುಂದಿನಂತೆ ನಡೆಸಲಾಗುತ್ತದೆ.

**1. ಪುಣ್ಯ ಗಣಪತಿ ಪೂಜೆ**

ಜನಪದರ ಯಾವುದೇ ಶುಭ ಕಾರ್ಯಗಳಿಗೆ ಮೊದಲು ಗಣಪತಿಯನ್ನು ಪೂಜಿಸುತ್ತಾರೆ. ದೇವಸ್ಥಾನದಲ್ಲಿ ಗಣಪತಿ ವಿಗ್ರಹಕ್ಕೆ ಜಳಕ ಮಾಡಿಸಿ ಅಭಿಷೇಕ ಮಾಡುವುದರೊಂದಿಗೆ ಆಚರಣೆಗಳನ್ನು ಪ್ರಾರಂಭಿಸಿ,ಎಲ್ಲವು ಸಾಂಘವಾಗಿ ಸಾಗಲಿ ಎಂದು ಬೇಡುತ್ತಾರೆ.

**2. ಮೂಲ ದೇವರ ಪ್ರಾರ್ಥನೆ**

ಜಾತ್ರೆಯ ಆಚರಣೆಯ ಆರಂಭದ 2ನೇಯ ದಿನ. ಬೆಟ್ಟದಲ್ಲಿ ಮೂಡಿರುವ ಶ್ರೀ ಸಿಡಿಲು ಮಲ್ಲಿಕಾರ್ಜುನ ಸ್ವಾಮಿ ಲಿಂಗಕ್ಕೆ ಅಭಿಷೇಕ, ಆರ್ಚನೆಗಳನ್ನು ಮಾಡಿ ಇಷ್ಟಾರ್ಥ ಸಿದ್ದಿಗಾಗಿ ಶಿವನ್ನನು ಪ್ರಾರ್ಥಿಸುತ್ತಾರೆ. ಈ ಲಿಂಗವೇ ಮೂಲದೇವರೆಂದು ನಂಬಲಾಗುತ್ತದೆ.

**3. ಧ್ವಜಾರೋಹಣ–ಕಳಶ ಸ್ಥಾಪನೆ**

ಸಕಲ ಕಾರ್ಯಗಳಿಗೆ ಚಾಲನೆ ಎಂಬಂತೇ ತಾಲ್ಲೂಕು ಕಛೇರಿಯ ತಹಶೀಲ್ದಾರರು ಅಥವಾ ನೀರಿಕ್ಷಕರು ಅಥವಾ ಧರ್ಮದರ್ಶಿಗಳ ಕೈಯಲ್ಲಿ ಧ್ವಜಾರೋಹಣ ಮಾಡಿಸಲಾಗುತ್ತದೆ. ಬಿಳಿ ಬಟ್ಟೆಯ ಮೇಲೆ ವೃಷಭ ಇರುವಂತಹ ಧ್ವಜವನ್ನು ಆರೋಹಣ ಮಾಡಿ ದೇವಸ್ಥಾನದ ಬಳಿ ಕಳಸವನ್ನು ಸ್ಥಾಪಿಸಲಾಗುತ್ತದೆ.

**4. ವೃಷಭರೋಹಣ**

ವೃಷಭ ಎಂದರೇ ಬಸವ 5ನೇಯ ದಿನದಂದು ಬಸವನ ಬೆಳ್ಳಿ ವಿಗ್ರಹದ ಮೇಲೆ ಮಲ್ಲಿಕಾರ್ಜುನ ದೇವರನ್ನು ಕೂರಿಸಿ, ಅದನ್ನು ಹೊತ್ತು ಊರಿನ ತುಂಬ ಉತ್ಸವವನ್ನು ಮಾಡುತ್ತಾರೆ. ಈ ಜಾತ್ರೆಯಲ್ಲಿ ಬಸವ ಮತ್ತು ಗಣಪತಿ ಮುಖ್ಯವಾಗಿ ಆಚರಣಿಗೆ ಒಳಪಡುವ ದೇವರುಗಳಾಗಿವೆ.

**5. ಗಿರಿಜಾ ಕಲ್ಯಾಣ**

ಐದು ದಿನಗಳಲ್ಲಿ ನಡೆಯುವ ಆಚರಣೆಗಿಂತಲು ಬಹು ಮುಖ್ಯವಾದ ಆಚರಣೆಯಾಗಿದೆ. ಬ್ರಹ್ಮರಥೋತ್ಸವದ ಹಿಂದಿನ ದಿನ ನಡೆಯುವ ಈ ಕಲ್ಯಾಣೋತ್ಸವವಕ್ಕೆ ದೂರ–ದೂರದ ಊರಿನಿಂದ ಸಾವಿರಾರು ಭಕ್ತಾದಿಗಳು ಭಾಗವಹಿಸುತ್ತಾರೆ. ಗಿರಿಜಾ ಕಲ್ಯಾಣ ನಡೆಯುವುದು ರಾತ್ರಿ ಸಮಯದಲ್ಲಿ. ಇದು ಈ ಆಚರಣೆಯನ್ನು ವಿಶೇಷ. ಕೈ ರಥದಲ್ಲಿ ಮಲ್ಲಿಕಾರ್ಜುನ ವಿಗ್ರಹವನ್ನು ಇಟ್ಟು ವೈಭವದಿಂದ ಶೃಂಗಾರ ಮಾಡಿ ಊರಿನ ಸುತ್ತ ಪ್ರದಕ್ಷಣಿ ಮಾಡಿ ದೇವಸ್ಥಾನದ ಮುಂದೆ ಹಾಕುವ ಚಪ್ಪರಕ್ಕೆ ತರುತ್ತಾರೆ. ಇದು ಇಂದಿನ ಹಿಂದೂ ವಿವಾಹದ ಹೆಣ್ಣನ್ನು ಮನೆ ತುಂಬಿಸಿಕೊಳ್ಳುವ ಆಚರಣೆಯನ್ನು ಹೋಲುತ್ತದೆ. ಆನಂತರ ಮದುವೆ ಮಂಟಪದಲ್ಲಿ ಶಿವನಿಗೂ ಗಿರಿಜೆಗೂ ಶಾಸ್ತ್ರೋಕ್ತವಾಗಿ ಬ್ರಾಹ್ಮಣರ ವಿಧಿವಿಧಾನಗಳನುಸಾರವಾಗಿ ಮದುವೆ ನೆರವೇರಿಸುತ್ತಾರೆ. ಇದು ಗ್ರಾಮೀಣ ಪರಿಸರದಲ್ಲಿನ ನೈಜವಾದ ಮದುವೆಯ ಆಚರಣೆಯನ್ನು ಬಿಂಬಿಸುವಂತೇ ಈ ಆಚರಣೆ ಜರುಗುತ್ತದೆ. ಇಂತಹ ಸಮಯದಲ್ಲಿ ಗಿರಿಜಾ ಕಲ್ಯಾಣ ಕಥಾ ಕಾಲಕ್ಷೇಪ ನಡೆಯುತ್ತದೆ.

ನಂತರ ಮೊದಲು ಬ್ರಾಹ್ಮಣರಿಗೆ ಅನ್ನಸಂತರ್ಪಣೆಯನ್ನು ಮಾಡಲಾಗುತ್ತದೆ. ಇದನ್ನು ಬ್ರಾಹ್ಮಣ ಸಂತರ್ಪಣೆ ಎನ್ನುವರು. ನಂತರ ನೆರೆದ ಭಕ್ತಾದಿಗಳಿಗೂ ಅನ್ನ ಸಂತರ್ಪಣೆ ಮಾಡಲಾಗುತ್ತದೆ. ನಂತರ ಕುದುರೆ ವಾಹನದ ಮೇಲೆ ದೇವರುಗಳನ್ನು ಕುಳ್ಳಿರಿಸಿಕೊಂಡು ಮೆರವಣಿಗೆ ಮಾಡುತ್ತಾರೆ. ಇದನ್ನು 'ಅಶ್ವಾರೋಹಣೋತ್ಸವ' ಎನ್ನುವರು.

**6. ಬ್ರಹ್ಮ ರಥೋತ್ಸವ**

'ಮಲ್ಲಯ್ಯನ ತೇರು' ಮೈಸೂರು ಜಿಲ್ಲೆಯ ಪ್ರಸಿದ್ದ ರಥೋತ್ಸವಗಳಲ್ಲಿ ಒಂದಾಗಿದೆ. ಗಿರಿಜಾ ಕಲ್ಯಾಣವನ್ನು ನೆರವೇರಿಸಿದ ನಂತರ ಆ ವಿಗ್ರಹವನ್ನು ತೇರಿನ ಮೇಲೆ ಇಟ್ಟು ಎಳೆಯಲು ಶುಭ ಮುಹೂರ್ತವನ್ನು ಕೇಳುತ್ತಾರೆ. ಮೂಲ ನಕ್ಷತ್ರದ ಶುಭ ಮುಹೂರ್ತ ಬಂದ ಸಮಯದಲ್ಲಿಯೇ ತೇರನ್ನು ಎಳೆಯುತ್ತಾರೆ. ಹಲವು ಗ್ರಾಮಗಳಿಂದ ಭಕ್ತಾಧಿಗಳು ಇದಕ್ಕಾಗಿ ಆಗಮಿಸುವರು. ದೇವರಿರುವ ರಥಕ್ಕೆ ಹಣ್ಣು–ಜವನ ಎಸೆಯುವುದರ ಮೂಲಕ ತಮ್ಮ ಭಕ್ತಿಯ ಸೇವೆಯನ್ನು ಅರ್ಪಿಸುತ್ತಾರೆ. ಮತ ಭೇದವಿಲ್ಲದೆ ಎಲ್ಲರೂ ತೇರನ್ನು ಎಳೆಯುತ್ತಾರೆ.

ಇಂದು ಪ್ರಾಣಿಬಲಿ ನಿಷಿದ್ಧವಾಗಿರುವುದರಿಂದ ಪ್ರಾಣಿಬಲಿಯನ್ನು ಅರ್ಪಿಸುವುದಿಲ್ಲ. ಕೆಂಪು ಬಣ್ಣವನ್ನು ಹೊಂದಿರುವ ಅನ್ನವನ್ನು ಚೆಲ್ಲಿ ತೇರು ಎಳೆಯಲೂ ವಿಘ್ನ ಉಂಟಾಗದಂತೆ ದೇವರಲ್ಲಿ ಪ್ರಾರ್ಥಿಸುವರು. ಇದು ಐತಿಹಾಸಿಕವಾಗಿ ತಿಳಿದಂತೇ ಭೈರವ ಸಂಸ್ಕೃತಿ ಇದ್ದ ಕಾಲದಲ್ಲಿ ಪ್ರಾಣಿ ಬಲಿಯ ರೂಪದಲ್ಲಿದ್ದು ಕಾಲಾನಂತರ ನಿಷಿದ್ಧವಾಗಿದೆ. ಬಸವರಥ, ಗಣಪತಿರಥ, ಶ್ರೀ ಭ್ರಮರಾಂಭ, ಮಲ್ಲಿಕಾರ್ಜುನರಥ ಎಂಬ ಮೂರು ರಥಗಳು ಇವೆ. ಮೊದಲು ಬಸವನ ರಥವನ್ನು ಎಳೆದು ನಂತರ ಉಳಿದ ರಥಗಳನ್ನು ಎಳೆಯಲಾಗುತ್ತದೆ. ಇದು ಕಲ್ಯಾಣದ ಬಸವೇಶ್ವರನ ಪ್ರತೀಕವು ಆಗಿರಬಹುದು.

ರಥೋತ್ಸವವು ರಥಬೀದಿಯಲ್ಲಿ ಮಾತ್ರ ನಡೆಯುತ್ತದೆ. ಹಾಗಾಗಿ ಇದನ್ನು ತೇರಿನ ಬೀದಿ ಎಂದು ಕರೆಯುತ್ತಾರೆ. ಸಂಜೆ ಅದರ ಮೂಲಸ್ಥಾನಕ್ಕೆ ಸೇರಿಸಿ ವಿಗ್ರಹಗಳನ್ನು ದೇವಸ್ಥಾನಕ್ಕೆ ತಂದು ಇರಿಸಲಾಗುತ್ತದೆ.

### 7. ಶಾಂತೋತ್ಸವ

ರಥೋತ್ಸವದ ರಾತ್ರಿ ನೆಮ್ಮದಿ, ಶಾಂತಿಗಳ ಸಂಕೇತವಾಗಿ ನಡೆಯುವಂತಹ ಆಚರಣೆಯಾಗಿದೆ. 'ಹಂಸ' ವಾಹನದ ಮೇಲೆ ಬಸವ, ಗಣಪತಿ, ಭ್ರಮರಾಂಭ, ಮಲ್ಲಿಕಾರ್ಜುನರ ವಿಗ್ರಹಗಳನ್ನು ಕೂರಿಸಿ ಊರಿನ ಸುತ್ತ ಉತ್ಸವ ಮಾಡಿ ಶಾಂತಿ ಸಂಕೇತವಾದ ಎಳನೀರಿನ ನೈವೇದ್ಯ ಮಾಡಿ ಭಕ್ತಾದಿಗಳಿಗೂ ಸುಖ-ಸಮೃದ್ಧಿ ದೊರಕಲೆಂದು ಅದನ್ನು ಪ್ರಸಾದವಾಗಿ ಕೊಡುತ್ತಾರೆ.

### 8. ಪಾರ್ವಾಟ್ಯೋತ್ಸವ

ಬ್ರಹ್ಮ ರಥೋತ್ಸವವು ಮದುವೆಯಾದ ಹೆಣ್ಣು ಗಂಡುಗಳ ದಿಬ್ಬಣವನ್ನು ಮೆರವಣಿಗೆ ಮಾಡಿದಂತೆ ತೋರಿದರೆ, ಅನಂತರ ಅವರನ್ನು ಕೆಲವು ಆಟಗಳಲ್ಲಿ ತೊಡಗಿಸುವಂತೇ ಮಾಡುವುದೇ ಪಾರ್ವಾಟ್ಯೋತ್ಸವ.ದೇವರ ಗುಡಿಯ ಮುಂದೆ ಉಯ್ಯಾಲೆ ಕಟ್ಟಿ ಅದರ ಮೇಲೆ ವಿಗ್ರಹಗಳನ್ನಿಟ್ಟು ಹತ್ತು-ಹದಿನೈದು ನಿಮಿಷಗಳ ಕಾಲ ಉಯ್ಯಾಲೆ ಆಡಿಸಿ. ಪೂಜೆ ಮಂಗಳಾರತಿ ಮಾಡಿ, ನಂತರ ಸ್ವಸ್ಥಾನದಲ್ಲಿ ಇಡಲಾಗುತ್ತದೆ.

### 9. ಶಯನೋತ್ಸವ

ಎಂಟನೆ ದಿನದ ರಾತ್ರಿ ಶಯನೋತ್ಸವನ್ನು ಏರ್ಪಡಿಸಿ, ಭ್ರಮರಾಂಭ ಮತ್ತು ಮಲ್ಲಿಕಾರ್ಜುನ ದೇವರ ಮದುವೆಯ ನಂತರದ ಶಯನೋತ್ಸವ ನಡೆಸುತ್ತಾರೆ. ವಿಗ್ರಹಗಳಿಗೆ ಚೆನ್ನಾಗಿ ಅಲಂಕಾರ ಮಾಡಿ ತಿಂಡಿ-ಹಣ್ಣು ಹಂಪಲಗಳನ್ನು ಇಟ್ಟು ಪೂಜೆ ಮಾಡಿ, ದೇವಸ್ಥಾನವನ್ನು ತೆರವುಗೊಳಿಸುವರು. ಆ ರಾತ್ರಿ ದೇವರ ವಿಗ್ರಹಗಳನ್ನು ಬಿಟ್ಟು ಯಾರಿಗೂ ಪ್ರವೇಶ ನಿಷಿದ್ಧವಾಗಿರುತ್ತದೆ.

### 10. ತೀರ್ಥಸ್ನಾನ ಮತ್ತು ತೆಪ್ಪೋತ್ಸವ

ಒಂಬತ್ತು ದಿನಗಳ ಆಚರಣೆಗಳಲ್ಲಿ ಕೊನೆಯ ದಿನದ ಆಚರಣೆಯಾಗಿದೆ. ಶಯನೋತ್ಸವ ಆಚರಣೆಯ ಬೆಳಿಗ್ಗೆ ದೇವರುಗಳನ್ನು ಬೆಟ್ಟದ ಮೇಲೆ ತೆಗೆದುಕೊಂಡು ಹೋಗಿ, ಅಲ್ಲಿ ಇರುವ ಕೊಳದಲ್ಲಿ ತೀರ್ಥಸ್ನಾನ ಮಾಡಿಸಿಕೊಂಡು ಮತ್ತೆ ಕೆಳಗಿನ ದೇವಸ್ಥಾನಕ್ಕೆ ತಂದು ಪೂಜಿಸುತ್ತಿದ್ದರು. ಆದರೆ ಇಂದು ಕೆಲವು ಕಾರಣಗಳಿಂದ ಇದು ಸಾಧ್ಯವಾಗಿಲ್ಲ. ಬೆಟ್ಟದಪುರದಲ್ಲಿನ ಇರುವ ತಾವರೆಕೆರೆಗೆ ತೆಗೆದುಕೊಂಡು ಹೋಗಿ ತೀರ್ಥಸ್ನಾನ ಮಾಡಿಸಿ ಶೇಷವಾಹನದ ಮೇಲೆ ಕೂರಿಸಿಕೊಂಡು ಊರ ಸುತ್ತಾ ಮೆರವಣಿಗೆ ಮಾಡಿ ಅದೇ ರಾತ್ರಿ ವೇಳೆಗೆ ತಾವರೆಕೆರೆಯ ಬಳಿ ತಂದು ತೆಪ್ಪೋತ್ಸವವನ್ನು ಮಾಡುತ್ತಾರೆ. ದೇವರ ವಿಗ್ರಹಗಳನ್ನು ತೆಪ್ಪದ(ಹರಿಗೋಲು)ಮೇಲೆ ಈ ದೇವರ ವಿಗ್ರಹವನ್ನು ಕುಳ್ಳಿರಿಸಿ ವಿದ್ಯುತ್ ದೀಪಾಲಂಕಾರಗಳಿಂದ ಕಂಗೊಳಿಸುವಂತೆ ಮಾಡಲಾಗುತ್ತದೆ. ಕೆರೆಯಲ್ಲಿ ತೆಪ್ಪವನ್ನು ಸುತ್ತಾಡಿಸಿ ನಂತರ ಪ್ರಸಾದವನ್ನು ಹಂಚಿ ದೇವರ ವಿಗ್ರಹಗಳನ್ನು ದೇವಸ್ಥಾನಕ್ಕೆ ತರುತ್ತಾರೆ.

### 11. ಧ್ವಜಾವರೋಹಣ

ತೆಪ್ಪೋತ್ಸವ ಮುಗಿದ ನಂತರ ಒಂಬತ್ತು ದಿನಗಳ ಹಬ್ಬದ ವಾತಾವರಣಕ್ಕೆ ತೆರೆ ಬೀಳುವುದು. ಜಾತ್ರೆಯ ಆರಂಭದಂದು ಏರಿಸಿದ್ದ ಧ್ವಜವನ್ನು ಇಳಿಸುವುದರ ಮೂಲಕ ಹಬ್ಬವನ್ನು ಕೊನೆಗೊಳ್ಳುವುದನ್ನು ಸೂಚ್ಯವಾಗಿ ತಿಳಿಸುತ್ತದೆ. ಈ ರಥೋತ್ಸವದ ಅಂಗವಾಗಿಯೇ ಬೇರೆ-ಬೇರೆ ಕಡೆಗಳಿಂದ ಬಂದ ವ್ಯಾಪಾರಸ್ಥರು ವಿಧ-ವಿಧವಾದ ಸಿಹಿ ತಿಂಡಿಗಳು, ಪಾತ್ರೆಗಳು, ಆಟದ ಸಾಮಾನುಗಳನ್ನು ಮಾರುವ ಅಂಗಡಿಗಳನ್ನು ಇಟ್ಟು ವ್ಯಾಪಾರ ನಡೆಸುತ್ತಾರೆ. ಹತ್ತು-ಹದಿನೈದು ದಿನಗಳಲ್ಲಿ ಅತ್ಯಂತ ಚುರುಕಾಗಿ

ನಡೆಯುತ್ತದೆ. ಭಕ್ತ ಜನರಿಗೆ ದೇವರ ದರ್ಶನದೊಂದಿಗೆ ವಸ್ತುಗಳ ಕೊಳ್ಳುವಿಕೆಯ ಸಂತೋಷವು ಅವರದಾಗಿರುತ್ತದೆ.

ಈ ರೀತಿಯಲ್ಲಿ ಮಲ್ಲಯ್ಯನ ಜಾತ್ರೆ ಅಂತ್ಯಂತ ವಿಜೃಂಭಣೆಯಿಂದ ನಡೆಯುತ್ತದೆ.

## * ಮುಸ್ಲಿಂರ ಹಬ್ಬಗಳು *

### ಬಕ್ರೀದ್

ತ್ಯಾಗ, ಬಲಿದಾನ ಮತ್ತು ಅಲ್ಲಾಹನಲ್ಲಿ ಶರಣಾಗತಿಯ ಸಂದೇಶವನ್ನು ಸಾರುವ ಹಬ್ಬವಾಗಿದೆ. ಬಲಿ ಕೊಡುವ ಹಬ್ಬವೆಂದೇ ಕರೆಯುವ ಬಕ್ರೀದ್‌ನಲ್ಲಿ ಒಂಟೆ, ಎತ್ತು, ಆಡು ಈ ಪ್ರಾಣಿಗಳನ್ನು ಅಲ್ಲಾನಿಗೆ ವಿಶೇಷವಾಗಿ ಬಲಿ ಕೊಡುತ್ತಾರೆ. ಇದನ್ನು 'ಜಬಾ' ಎಂದು ಕರೆಯುತ್ತಾರೆ. ಶುದ್ಧ ಮಾಂಸವನ್ನು ಸರಿಯಾಗಿ ಮೂರು ಭಾಗ ಮಾಡಿ ಒಂದು ಭಾಗವನ್ನು ಬಡವರಿಗೆ, ಒಂದು ಭಾಗವನ್ನು ಬಂಧು ಮಿತ್ರರಿಗೆ ಹಂಚಿ, ಉಳಿದೊಂದು ಭಾಗವನ್ನು ಅವರು ಬಳಸುವರು. ಮುಸ್ಲಿಂ ಬಾಂಧವರು ಶ್ರದ್ಧಾಭಕ್ತಿಯಿಂದ ಬಕ್ರೀದ್ ಹಬ್ಬವನ್ನು ಆಚರಿಸುತ್ತಾರೆ.

### ಮೊಹರಂ

ಹಿಜಿರಾ ಸಂವತ್ಸರದ ಮೊದಲನೆಯ ತಿಂಗಳು ಮೊಹರಂ. ಇದು ಹತ್ತು ದಿನಗಳ ಆಚರಣೆಯನ್ನು ಒಳಗೊಂಡಿರುವ ಹಬ್ಬ 'ಮೊಹರಂ' .ಎಂದರೆ ಅರಬ್ಬಿ ಭಾಷೆಯಲ್ಲಿ ನಿಷಿದ್ಧವಾದ ಅಥವಾ ವರ್ಜ್ಯವಾದ ಎಂದರ್ಥ. ಅರಬ್ ದೇಶದಲ್ಲಿ ಈ ತಿಂಗಳಲ್ಲಿ ಯುದ್ಧ ಅಥವಾ ರಕ್ತಪಾತವು ಧಾರ್ಮಿಕವಾಗಿ ನಿಷಿದ್ದವಾಗಿತ್ತು. ಹಾಗಾಗಿ ಹೆಸರು ಬಂದಿರಬೇಕು. ಮೊಹರಂನ ಇನ್ನೊಂದು ಹೆಸರು 'ಸೈಯದುಲ್ ಅಷೆಹರ್' ಎಂದರೆ ಎಲ್ಲಾ ತಿಂಗಳುಗಳ ದೊರೆ ಎಂದರ್ಥ. ಈ ತಿಂಗಳಿನಲ್ಲಿಯೇ ಧರ್ಮ ರಕ್ಷಣೆಗಾಗಿ 'ಹುಸೇನರು' ಹುತಾತ್ಮರಾದರು. ಹಾಗಾಗಿ ಈ ತಿಂಗಳನ್ನು ದುಃಖದಾಯಕ ಪವಿತ್ರವೆಂದು ಪರಿಗಣಿತವಾಗಿದೆ, ಈ ಆಚರಣೆಯು ಶೋಕಸ್ಥಾಯಿಯಾಗಿದ್ದರೂ ಕಾಲಚಕ್ರದಲ್ಲಿ ತನ್ನ ಮೂಲಭಾವವನ್ನು ಕಳೆದುಕೊಂಡು ಆಚರಣೆಯ ರಂಗು ಪಡೆದುಕೊಳ್ಳುತ್ತಿದೆ. ಮಾಂಸಾಹಾರ ನಿಷಿದ್ಧವಾಗಿರುತ್ತದೆ.

**ರಂಜಾನ್**

ರಂಜಾನ್ ಹಬ್ಬವು ಮುಸ್ಲಿಂ ಬಾಂಧವರಿಗೆ ಸಂತೋಷದ ದೊಡ್ಡ ಹಬ್ಬ. ಎಲ್ಲಾ ಮುಸ್ಲಿಂ ಪಂಗಡದವರು ಈ ಹಬ್ಬವನ್ನು ಆಚರಿಸುವರು. ಹಿಜರಾ ಶಕೆಯ ಒಂಬತ್ತನೆಯ ತಿಂಗಳು ರಂಜಾನ್ ಆಗಿದೆ. ಅರಬ್ಬಿ ಭಾಷೆಯಲ್ಲಿ 'ರಮಜ್' ಎಂದರೆ ಸುಡುವುದು ಬೇಗೆಯಿಂದ ಕಾಲು ಸುಡುವುದು ಎಂದರ್ಥ. ತುರ್ಕಿಯ ಗಣಸಿಗೆಯ ಪ್ರಕಾರ ಬೇಸಿಗೆಯಲ್ಲಿ ಬರುತ್ತದೆ. ಹಾಗಾಗಿ ಇದಕ್ಕೆ ಈ ಹೆಸರು ಬಂದಿದೆ. ರೋಜಾ(ಉಪವಾಸ) ಆವರಿಸುವುದರಿಂದ ಪಾಪಗಳು ಸುಟ್ಟು ಬೂದಿಯಾಗುತ್ತದೆಂಬ ಭಾವನೆಯಿಂದಲೂ ಈ ಹೆಸರು ಬಂದಿರಬೇಕು.

ರೋಜಾ ಮುಗಿಸಿದ ನಂತರ ತಿಂಗಳ ಕೊನೆಯ ದಿನವನ್ನು 'ಈದ್‌ಉಲ್‌ಫಿತರ್' ಎಂದು ಆಚರಿಸುತ್ತಾರೆ. ಈದ್ ಎಂದರೇ, 'ಹಬ್ಬ' ಉಲ್‌ಪಿತರ್ ಎಂದರೇ ಉಪವಾಸ ಮುಗಿಸುವುದು ಎಂದರ್ಥ. ಉಪವಾಸದ ಈ ಹಬ್ಬದ ಕೇಂದ್ರ ಆಚರಣೆ ದುಃಖದಿಂದ ಪಾರಾಗಲು ಅಲ್ಲಾಹನ ಪ್ರೇಮ ಸಂಪಾದಿಸಲು ರೋಜಾ ಪವಿತ್ರ ಮಾರ್ಗವೆಂದು ಮುಸ್ಲಿಂ ಬಾಂಧವರು ನಂಬುತ್ತಾರೆ. ಈ ತಿಂಗಳಲ್ಲಿ ದಿನಕ್ಕೆ ಐದು ಬಾರಿ ಮಸೀದಿಯಲ್ಲಿ ನಮಾಜ್ ಮಾಡುವುದು ಕಡ್ಡಾಯವಾಗಿರುತ್ತದೆ. ರಾತ್ರಿ ಒಂಬತ್ತು ಗಂಟೆಯ ಹೊತ್ತಿಗೆ 'ತರಾವಿ' ಎಂಬ ವಿಶಿಷ್ಟ ನಮಾಜು ಸಲ್ಲಿಸುತ್ತಾರೆ. ಈ ನಮಾಜನ್ನು ರಂಜಾನ್ ತಿಂಗಳಲ್ಲಿ ಮಾತ್ರ ಮಾಡಲಾಗುತ್ತದೆ. ಹನ್ನೆರಡು ವರ್ಷ ಮೇಲ್ಪಟ್ಟ ಎಲ್ಲಾ ಸ್ತ್ರಿ-ಪುರುಷರಿಗೆ ರೋಜಾ ಕಡ್ಡಾಯವಾಗಿದೆ. ಸೂರ್ಯೋದಯಕ್ಕೆ ಮೊದಲು ಮಿತವಾದ ಆಹಾರ ಸೇವಿಸಿ ಸೂರ್ಯಾಸ್ತದವರೆಗೂ ಉಪವಾಸವಿರುವುದು ಸರ್ವೇಸಾಮಾನ್ಯ, ಮುಸ್ಲಿಂ ಬಾಂಧವರು ಶ್ರದ್ದೆ, ಭಕ್ತಿಯಿಂದ ಈ ಹಬ್ಬವನ್ನು ಆಚರಿಸುತ್ತಾರೆ.

## * ಕ್ರೈಸ್ತ ಹಬ್ಬಗಳು *

ಇದರೊಂದಿಗೆ ಕ್ರೈಸ್ತರು ಕ್ರಿಸ್‌ಮಸ್, ಗುಡ್‌ಫ್ರೈಡೆ, ಈಸ್ಟರ್ ಹಬ್ಬಗಳನ್ನು ಆಚರಿಸುವರು.

ಈ ಎಲ್ಲಾ ಹಬ್ಬಗಳ ಜೊತೆಗೆ ಬೆಟ್ಟದಪುರದಲ್ಲಿ ರಾಷ್ಟ್ರೀಯ ಹಬ್ಬಗಳಾದ ಸ್ವಾತಂತ್ರ್ಯ ದಿನಾಚರಣೆ, ಗಣರಾಜ್ಯೋತ್ಸವ, ಗಾಂಧಿಜಯಂತಿ ಮುಂತಾದವುಗಳನ್ನು

ಸಾರ್ವಜನಿಕರು, ಶಾಲಾ ಕಾಲೇಜುಗಳು ಮತ್ತು ಸಂಘ ಸಂಸ್ಥೆಗಳು ವೈಭವದಿಂದ ಆಚರಿಸುತ್ತಾರೆ.

### *** ಹರಕೆ ಮತ್ತು ನಂಬಿಕೆಗಳು ***

ಬೆಟ್ಟದಪುರದಲ್ಲಿ ದೇವರುಗಳನ್ನು ಶ್ರದ್ಧಾಭಕ್ತಿಯಿಂದ ಪೂಜಿಸುವುದರ ಜೊತೆಗೆ ಅವರು ತಮ್ಮದೇಯಾದ ಹರಕಗಳು ನಂಬಿಕೆಗಳನ್ನು ಉಳಿಸಿಕೊಂಡು ಬಂದಿದ್ದಾರೆ. ತಮ್ಮಗೆ ಬಂದ ಕಷ್ಟ-ಕಾರ್ಪಣ್ಯಗಳನ್ನು ದುಃಖ-ದುಮ್ಮಾನಗಳನ್ನು ಪರಿಹರಿಸಿಕೊಳ್ಳಲು ಪ್ರಯತ್ನಿಸುವುದು ಕಂಡು ಬರುವುದು ಸಾಮಾನ್ಯ. ಇದೇ ರೀತಿಯಾಗಿ ಬೆಟ್ಟದಪುದ ಶ್ರೀ ಸಿಡಿಲು ಮಲ್ಲಿಕಾರ್ಜುನ ಸ್ವಾಮಿಯ ಬಗ್ಗೆಯು ಹಲವಾರು ನಂಬಿಕೆಗಳಿವೆ.

**ಉದ್ದಿನವಡೆ ಮಾರಿಯ ಹರಕೆ**

ಇಷ್ಟಾರ್ಥಗಳು ಸಿದ್ಧಿಸಿದಲ್ಲಿ ಉದ್ದಿನವಡೆ ಮಾಲೆಯನ್ನು ಅರ್ಪಿಸುವುದಾಗಿ ಜನರು ಹರಸಿಕೊಳ್ಳುತ್ತಾರೆ. ತಮ್ಮ ಆಸೆ ಕೈಗೂಡಿದರೇ ರಥೋತ್ಸವದ ನಾಲ್ಕನೆಯ ದಿನದ ಆಚರಣೆಯಂದು ಭೂತಾರೋಹಣ ಮಾಡುವಾಗ ಮಲ್ಲಯ್ಯನ ವಿಗ್ರಹಕ್ಕೆ ಉದ್ದಿನವಡೆ ಮಾಲೆ ಹಾಕುತ್ತಾರೆ. ಅನಂತರ ವಡೆಯನ್ನು ಪ್ರಸಾದವನ್ನಾಗಿ ಭಕ್ತಾದಿಗಳಿಗೆ ಹಂಚುತ್ತಾರೆ.

**ಕಲ್ಲು ಹುಯಿಸುವುದು**

ಯಾರಿಗಾದರೂ ದೆವ್ವ ಅಥವಾ ಭೀತಿ ಹಿಡಿದಿದೆ. ಎಂದು ತಿಳಿದರೆ ಬೆಟ್ಟಕ್ಕೆ ಕರೆದುಕೊಂಡು ಬಂದು ಮೆಟ್ಟಿಲಿನ ಮೇಲೆ ಮನುಷ್ಯರ ಚಿತ್ರವನ್ನು ಕೆತ್ತಿಸಿ ಪೂಜೆ ಪುನಸ್ಕಾರ ಮಾಡಿ ಹೋಗುವುದು ರೂಢಿ, ಈ ರೀತಿ ಬೆಟ್ಟದಲ್ಲಿ ದಂಪತಿ ಹಾಗೂ ಮಗುವಿರುವ ಚಿತ್ರಗಳು ಇವೆ. ಇವುಗಳು ಮಕ್ಕಳಾಗದವರು ಹರಸಿಕೊಂಡು ಕೆತ್ತಿಸಿರುವ ಚಿತ್ರಗಳಾಗಿವೆ.

**ಪಂಜಿನ ಸೇವೆ**

ಪಂಜಿನ ಸೇವೆ ಎಂದರೆ ದೀಪಾವಳಿ ಹಬ್ಬದಲ್ಲಿ ನಡೆಯುವ ದೀವಟಿಗೆ ಉತ್ಸವ. ಉತ್ಸವದಲ್ಲಿ ದೀವಟಿಗೆಯನ್ನು ಹಿಡಿದು ದೇವರ ಜೊತೆ ಬೆಟ್ಟವನ್ನು ಒಂದು ಸುತ್ತು ಬರುವುದು ಎಂದರ್ಥ. ಕಬ್ಬಿಣದ ಹಿಡಿಗೆ ಬಿಳಿಯ ಬಟ್ಟೆಯನ್ನು ಸುತ್ತಿ ಅದಕ್ಕೆ ಮೂರು ರೀತಿಯ ಎಣ್ಣೆಯನ್ನು ಹಾಕಿ ಹೊತ್ತಿಸಿಕೊಂಡು ಕೈಯಲ್ಲಿ ಹಿಡಿದು ಮಲ್ಲಯ್ಯನ

ಗುಣಗಾನ ಮಾಡುತ್ತಾ, ಹಾಡು ಹಾಡುತ್ತಾ ಮೆರವಣಿಗೆಯಲ್ಲಿ ಸಾಗುತ್ತಾರೆ. ಇದು ಒಂದು ರೀತಿಯ ಹರಕೆಯೂ ಹೌದು; ಉತ್ಸಾಹದಿಂದ ಪಾಲ್ಗೊಳುವಿಕೆಯೂ ಹೌದು. ಆದರೆ ಇದನ್ನು ಮಾಡುವವರು ಆ ದಿನ ಉಪವಾಸವಿರಬೇಕೆಂಬ ನಂಬಿಕೆ ಇದೆ. ಸಾಮಾನ್ಯವಾಗಿ ದೇವರಿಗೆ ದೀವಟಿಗೆ ಹಿಡಿಯುವವರು ಬಟ್ಟೆ ಅಂದರೆ ಮೇಲುವಸ್ತ್ರವನ್ನು ಧರಿಸುವುದಿಲ್ಲ. ಪಂಜಿನ ಸೇವೆಯನ್ನು ನೋಡಲೂ ಅದ್ಭುತ ಮತ್ತು ರೋಮಾಂಚನಾಕಾರಿ ರಾತ್ರಿಯ ಕತ್ತಲೆಯಲ್ಲಂತೂ ದೀಪಗಳೇ ನಡೆದಾಡುತ್ತಿವೆ ಎಂಬ ಭ್ರಮೆ ಹುಟ್ಟಿಸುತ್ತದೆ. ಹಲವು ಭಕ್ತಾದಿಗಳು ಕಣ್-ಮನಗಳನ್ನು ತುಂಬಿಕೊಳ್ಳಲು ಇದಕ್ಕಾಗಿ ನೆರೆದಿರುತ್ತಾರೆ.

**ಮಂಟಪ ಸೇವೆ**

ಮನೆಯ ಮುಂದೆ ಚಪ್ಪರವನ್ನು ಹಾಕಿ ಅಲ್ಲಿ ದೇವರುಗಳನ್ನು ಇಟ್ಟು ಪೂಜೆ ಮಾಡಿಸಿದರೇ ಇಷ್ಟಾರ್ಥ ಸಿದ್ಧಿಸುತ್ತದೆ ಒಳ್ಳೆಯದಾಗುತ್ತದೆ ಎಂಬ ಮನೋಭಾವ. ಈ ಆಚರಣೆಯು ದೀಪಾವಳಿ ಹಬ್ಬದಲ್ಲಿ ಮಾತ್ರ ಕಾಣಲೂ ಸಾಧ್ಯ ಮಲ್ಲಯ್ಯ, ಗಿರಿಜೆ ಮತರ್ತು ಬಸವೇಶ್ವರರನ್ನು ಬೆಟ್ಟ ಸುತ್ತ ಸುತ್ತಿಸಿಕೊಂಡು ಬರುವಾಗ ನಿರಂತರವಾಗಿ ಹೊತ್ತು ತಿರುಗುವುದು ಕಷ್ಟ, ಅದಕ್ಕಾಗಿ ದಣಿವಾರಿಸಿಕೊಳ್ಳಲೂ ಅಲ್ಲಲ್ಲಿ ಇಡಬೇಕಾಗುತ್ತದೆ. ಹಾಗಾಗಿ ಭಕ್ತಾದಿಗಳು ಮಂಟಪವನ್ನು ಕಟ್ಟಿರುತ್ತಾರೆ. ಇದರ ಜೊತೆಗೆ ಭಕ್ತಾದಿಗಳಿಗೆ ಮಜ್ಜಿಗೆ, ನೀರು, ಪಾನಕಗಳನ್ನು ಇಟ್ಟಿರುತ್ತಾರೆ ಇದರಲ್ಲಿ ಹರಕೆಯ ಪಾಲು ಹೆಚ್ಚಾಗಿರುತ್ತದೆ. ಈ ರೀತಿ ಸೇವೆ ಸಲ್ಲಿಸಲು ಇಚ್ಛಿಸುವವರು ಮೊದಲು ಮುಜರಾಯಿ ಇಲಾಖೆಯವರಿಗೆ ಒಂದು ಕಾಲು ರೂಪಾಯಿಯನ್ನು ದತ್ತರಿಯಾಗಿ ಸಲ್ಲಿಸಿ ಅವರಿಂದ ಅಪ್ಪಣೆಯನ್ನು ಪಡೆಯಬೇಕಾಗಿರುತ್ತದೆ.

ಮಂಟಪವು ನಾಲ್ಕು ಮೂಲಗಳಿಗೆ ನಾಲ್ಕು ಕಂಬಗಳನ್ನು ನೆಟ್ಟು ಹಸಿರು ಎಲೆ ತೆಂಗಿನ ತಾರಾಳೆಗಳನ್ನು(ಎಲೆ)ಗಳನ್ನು ಹಾಕಿ ರಂಗೋಲಿ ಮತ್ತು ತೋರಣಗಳಿಂದ ಸಿಂಗರಿಸಿರುತ್ತಾರೆ. ದೇವರ ವಿಗ್ರಹಗಳಿರುವ ಕುರ್ಜನ್ನು ಆ ಚಪ್ಪರದ ಆಡಿಯಿಟ್ಟು ಪೂಜೆ ಸಲ್ಲಿಸುತ್ತಾರೆ.

ವಿವಾಹವಾಗಿ ಬಹುಕಾಲ ಮಕ್ಕಳಾಗದಿದ್ದಲ್ಲಿ, ದಂಪತಿಗಳು ಮಕ್ಕಳಾದರೇ ತೊಟ್ಟಿಲು ಶಿಶುವನ್ನು ಮಾಡಿಸಿಕೊಡುವುದಾಗಿ ಹರಕೆ ಹೊರುತ್ತಾರೆ. ಬೆಳ್ಳಿಯಿಂದ ಮಾಡಲಾದ ತೊಟ್ಟಿಲು ಶಿಶುವನ್ನು ಹರಕೆಯಾಗಿ ಒಪ್ಪಿಸುತ್ತಾರೆ. ಬಹಳ ದಿನಗಳವರೆಗೆ

ಹೆಣ್ಣು ಮಕ್ಕಳಿಗೆ ವಿವಾಹವಾಗದಿದ್ದರೆ ಗಿರಿಜೆಗೆ ಸೀರೆಯನ್ನು ಕೊಡುವುದು ತಮಗೆ ಒಳ್ಳೆಯದಾಗಲಿ ಎಂಬ ನಂಬಿಕೆಯಿಂದ ರಥವನ್ನು ಎಳೆಯುವುದು, ಯುಗಾದಿಯ ಹೊನ್ನಾರು ಕಟ್ಟುವಾಗ ಮಲ್ಲಯ್ಯನ ಹೆಸರು ಹೇಳಿ ಕಟ್ಟಬೇಕು ಆಗ ಬೇಳೆ ಚೆನ್ನಾಗಿ ಬರುತ್ತದೆ ಎಂಬ ನಂಬಿಕೆಯಿದೆ. ಹಾಲು ಕೊಡುವ ಹಸುವು ಹಾಲು ಕೊಡದಿದ್ದರೇ ದೇವರಿಗೆ ಬೇಡಿಕೊಳ್ಳುವುದು, ಮತ್ತೆ ಆ ಹಾಲು ಹಸು ಕೊಟ್ಟರೇ ಅದೇ ಹಾಲನ್ನು ಹರಕೆಯಾಗಿ ಬೆಟ್ಟದ ಪಶ್ಚಿಮ ದಿಕ್ಕಿನ ಚಿತ್ರವಾಡದ ಹತ್ತಿರ ಇರುವ ಎಮ್ಮೆ ಬಸಪ್ಪ, ಕಡ್ಲೆಕಾಳುಬಸಪ್ಪ, ವಿಗ್ರಹಗಳಿಗೆ ಹರಕೆಯಾಗಿ ಎರೆಯುವುದು. ನೈವೇದ್ಯ ಮಾಡುವುದು ಅಥವಾ ಕರುವನ್ನು 'ಗೂಳಿ' ಎಂಬ ಹೆಸರಲ್ಲಿ ಅಥವಾ 'ಬಸವ' ಎಂಬ ಹೆಸರಿನಲ್ಲಿ ಬಿಟ್ಟು ಬಿಡುವುದು. ಹೀಗೆ ಹಲವಾರು ನಂಬಿಕೆಗಳು ಅವರ ಬಾಳಿನಲ್ಲಿ ಹಾಸುಹೊಕ್ಕಾಗಿವೆ.

ಹೀಗೆ ಬೆಟ್ಟದಪುರದಲ್ಲಿನ ಜನರು ತಮ್ಮದೇ ಆಚರಣೆ, ಸಂಪ್ರದಾಯಗಳ ಜೊತೆಗೆ ವಿಶೇಷವಾದ ನಂಬಿಕೆ ಮತ್ತು ಹರಕೆಗಳ ಮೂಲಕ ದೇವರ ಅನುಗ್ರಹಕ್ಕೆ ಪಾತ್ರರಾಗಲೂ ಕಾತರಿಸುವುದು ಸಾಮಾನ್ಯವಾಗಿದೆ.

## *** ಸಾಂಸ್ಕೃತಿಕ ಹಿನ್ನೆಲೆ ***

ಪ್ರತಿಭೆಯು ಎಲ್ಲಿ ಯಾವಾಗ ಹುಟ್ಟಿ ಬರುತ್ತದೆ ಎಂಬುದನ್ನು ಊಹಿಸುವುದು ಕಷ್ಟಕರ. ಅದು ಯಾವುದೇ ಕ್ಷೇತ್ರದಲ್ಲಿಯೇ ಆಗಿರಬಹುದು. ಇಂತಹ ಪ್ರತಿಭೆಗಳು ವಿವಿಧೆಡೆಗಳಲ್ಲಿ ಪ್ರಕಾಶಿಸುವುದು ಪ್ರತಿಭೆಗೆ ನೀಡುವ ಪುರಸ್ಕಾರವೆಂದೇ ಹೇಳಬಹುದು. ಚಲನಚಿತ್ರ ಕ್ಷೇತ್ರದಲ್ಲಿ ಎಲ್ಲರನ್ನು ನಗೆಗಡಲಿನಲ್ಲಿ ತೇಲಿಸುತ್ತಿದ್ದ ಕನ್ನಡ ಚಲನಚಿತ್ರದ ದೈತ್ಯ ಹಾಸ್ಯ ಪ್ರತಿಭೆ ಮುಸರಿ ಕೃಷ್ಣಮೂರ್ತಿಯವರು ಮೂಲತಃ ಬೆಟ್ಟದಪುರದವರು ಎನ್ನಲು ಹೆಮ್ಮೆಯಾಗುತ್ತದೆ. ಆದರೂ ಬೆಟ್ಟದಪುರದಲ್ಲಿ ಸಾಂಸ್ಕೃತಿಕ ಕ್ಷೇತ್ರದಲ್ಲಿ ಗುರುತಿಸಿಕೊಳ್ಳುವ ಪ್ರತಿಭೆಗಳು ವಿರಳವಾಗಿದೆ. ಮುಸುರಿಯವರು ರಂಗಕಲಾವಿದದರಾಗಿದ್ದು ಗುಬ್ಬಿ ನಾಟಕ ಕಂಪೆನಿಯಲ್ಲಿ ನಟರಾಗಿದ್ದು, ಅತ್ಯುತ್ತಮ ರಂಗಗೀತೆಗಳ ಗಾಯಕರು ಆಗಿದ್ದರು. ಇವರು 'ವಾಣಿ' ಚಿತ್ರದ ಮೂಲಕ ಚಿತ್ರರಂಗ ಪ್ರವೇಶಿಸಿದರು.

ಪಡುವಾರಹಳ್ಳಿ ಪಾಂಡವರು, ಕನೆಕ್ಷನ್ ಕಾಳಪ್ಪ, ಧರ್ಮಸೇರೆ, ನಾ ನಿನ್ನ ಬಿಡಲಾರೆ, ಶುಭಮಂಗಳ, ಅನುರಕ್ತ, ಬೆಕ್ಕಿನಕಣ್ಣು, ಹೀಗೆ ಹತ್ತು ಹಲವು ಚಲನಚಿತ್ರಗಳಲ್ಲಿ

ಅಭಿನಯಿಸಿ, ಹಾಸ್ಯವೆಂದರೆ ಮುಸರಿ, ಮುಸರಿ ಅಂದರೇ ಹಾಸ್ಯವೆಂದು ಹೆಸರು ಮಾಡಿದರು.

ಇವರು ಮಕ್ಕಳು, ಶ್ರೀ ಜಯಸಿಂಹ ಮುಸರಿ, ಶ್ರೀ ಗುರುದತ್ ಮುಸುರಿಯವರು ತಂದೆಯಂತೇ ಚಿತ್ರರಂಗ ಪ್ರವೇಶಿಸಿದ್ದು ಮುಸುರಿ ಕಂಬೈನ್ಸ್ ಸಂಸ್ಥೆಯ ಮುಲಕ ಹಲವು ಚಿತ್ರಗಳನ್ನು ತಯಾರಿಸಿದ್ದಾರೆ.

ಬೆಟ್ಟದಪುರದಲ್ಲಿ ಗುರ್ತಿಸಬಹುದಾದ ಸಂಘಗಳೆಂದರೇ ಸಹ್ಯಾದ್ರಿ ಯುವಕರಸಂಘ, ಬಸವೇಶ್ವರ ಯುವಕಮಂಡಳಿ ಮತ್ತು ಕಸ್ತೂರಿಬಾ ಯುವತಿ ಮಂಡಳಿ ಈ ಸಂಘಗಳು ಸಾಂಸ್ಕೃತಿಕವಾಗಿ ಮತ್ತು ಸಾಮಾಜಿಕವಾಗಿ ಅಷ್ಟಿಷ್ಟು ಹೆಸರು ಗಳಿಸಿವೆ. ಸಹ್ಯಾದ್ರಿ ಯುವಕ ಸಂಘದ ಸದಸ್ಯರುಗಳು ಜನಪದ ಕಲೆಗಳಾಗಿದ್ದು ವೀರಭದ್ರ ಕುಣಿತ, ಕೋಲಾಟ, ಪೂಜಾಕುಣಿತ, ಪಿರಿಯಾಟ್ಟಣದ ವೀರ ಪೈಗೂರ್ ಫಕೀರನ ಕುಣಿತ, ನಂದಿಕೋಲು ಕುಣಿತ ಇತ್ಯಾದಿ ಜನಪದ ನೃತ್ಯಗಳನ್ನು ತಾಲೂಕು ಮತ್ತು ಜಿಲ್ಲಾ ಮಟ್ಟದ ಯುವ ಜನ ಮೇಳದಲ್ಲಿ ಪಾಲ್ಗೊಂಡಿದ್ದಾರೆ. ಅಳಿವಿನಂಚಿರುವ ಜನಪದ ಕಲೆಗಳ ಬಗ್ಗೆ ಕಾಳಜಿ ವಹಿಸಿ ಅವುಗಳನ್ನು ಕಲಿತು ಪ್ರದರ್ಶಿಸುತ್ತಿರುವುದು ಸಂತಸದ ವಿಚಾರವಾಗಿದೆ. ತಾಲೂಕಿನಲ್ಲಿ ಪ್ರಪ್ರಥಮ ಬಾರಿಗೆ 1924 ರಲ್ಲಿ, ಮಲ್ಲಿಕಾರ್ಜುನ ಸ್ವಾಮಿ ಸಹಕಾರ ಸಂಘ ಸ್ಥಾಪನೆಯಾಗಿದ್ದು ಪ್ರಶಂಸನೀಯವಾದುದಾಗಿದೆ. ಇಂದು ದೈತ್ಯಾಕಾರವಾಗಿ ಬೆಳೆದು ತಾಲ್ಲೂಕಿನಲ್ಲಿಯೇ ದೊಡ್ಡ ಪ್ರಮಾಣದ ಸಹಕಾರಿ ಸಂಘವಾಗಿದೆ.

## *** ಭಾಷೆ ***

ಜನರು ತಮ್ಮ ಅಭಿಪ್ರಾಯಗಳನ್ನು ಭಾವನೆಗಳನ್ನು ಹಂಚಿಕೊಳ್ಳುವ ಮಾರ್ಗವೇ ಭಾಷೆ. ಭಾಷೆಯು ಪ್ರಮಾಣಾತ್ಮಕವಾಗಿ ದೂರ–ದೂರ ಹೋದಂತೆ ಪ್ರಾದೇಶಿಕ ಭಿನ್ನತೆಗಳನ್ನು ಬೆಳೆಸಿಕೊಳ್ಳುತ್ತದೆ. ಭಾಷೆಯ ಜನತೆಯ ಸಂಸ್ಕೃತಿ ಸಂಪರ್ಕ ಇನ್ನೊಂದು ಭಾಷೆಯ ಸಂಸ್ಕೃತಿ ಸಂಪರ್ಕ ಇವುಗಳ ಪ್ರಭಾವದಿಂದ ಭಿನ್ನ–ಭಿನ್ನ ರೂಪು ಪಡೆಯುತ್ತದೆ. ಇದು ಜೀವಂತ ಭಾಷೆಯ ಜೀವನಾಡಿ ಭಾಷೆ ಸಾಮಾಜಿಕ ಕ್ರಮ. ಇಂತಹ ಭಾಷೆ ಜನರ ಸಂಸ್ಕೃತಿ ಆಚಾರ– ವಿಚಾರ, ಜಾತಿ, ಕುಲ, ವೃತಿ, ಕಸುಬು, ಶಿಕ್ಷಣ, ಭೌಗೋಳಿಕ ಹಿನ್ನೆಲೆಗಳ ಕಾರಣದಿಂದ ಊರಿನಿಂದ ಊರಿಗೆ ಜಾತಿಯಿಂದ

ಜಾತಿಗೆ ಬೇರೆ ಬೇರೆ ಆಯಾಮ ಪಡೆದುಕೊಳ್ಳುತ್ತದೆ. ಹೀಗಾಗಿ ಉಪಭಾಷೆ ಪ್ರಭೇದಗಳು ಹೆಚ್ಚಾಗಲು ಕಾರಣವಾಗುತ್ತದೆ. ಇದನ್ನು ಗಮನದಲ್ಲಿರಿಸಿಕೊಂಡು ಬೆಟ್ಟದಪುರದ ಭಾಷೆಯ ಕೆಲವು ವಿಶೇಷತೆಗಳನ್ನು ಪರಿಶೀಲಿಸಬಹುದಾಗಿದೆ.

ಅಕ್ಷರಸ್ಥರು ಮತ್ತು ಅನಕ್ಷರಸ್ಥರು ಒಳಸುವ ಭಾಷೆಗೂ ಸಾಕಷ್ಟು ವ್ಯತ್ಯಾಸವಿದೆ. ಆದರೆ ಕೆಲವೊಮ್ಮೆ ಪ್ರಾದೇಶಿಕತೆ ಕೆಲಸ ಮಾಡುವುದುಂಟು ಅವಿದ್ಯಾವಂತರಲ್ಲಿ ಸಾಮಾನ್ಯವಾಗಿ 'ಕ' ಕಾರ 'ಚ' ಕಾರವಾಗಿ ಉಚ್ಚಾರಣೆಗೊಳ್ಳುತ್ತದೆ. ಪದದ ಆದಿಯಲ್ಲಿ 'ಕ' ಕಾರ ಬದಲು 'ಚ' ಕಾರ ಹೆಚ್ಚಾಗಿ ಬಳಕೆಯಾಗುತ್ತದೆ. ಉದಾಹಣೆಗೆ ಕೆಲವು–ಚೆಲವು, ಕೇಳು–ಚೇಳು, ಕಿವಿ–ಚಿವಿ ಕೆಲವೂಮ್ಮೆ 'ಚ' ಕಾರ 'ಕ' ಕಾರವಾಗಿಯೂ ಬಳಸಲ್ಪಡುತ್ತದೆ. ಉದಾ ಛತ್ರಿ–ಕೆತ್ರಿ, ಚೆಂಡು–ಕೆಂಡು 'ಓ' ಕಾರದ ಉಚ್ಚಾರಣೆಯು 'ವ' ಕಾರವಾಗಿ ಉಚ್ಚಾರವಾಗುವುದು. ಇದು ಅವಿದ್ಯಾವಂತರಲ್ಲಿಯೇ ಹೆಚ್ಚು , ಉದಾಹರಣೆ ದೋಸೆ–ದ್ವಾಸೆ, ಕೋಟೆ–ಕ್ವಾಟೆ, ಜೋಕೆ–ಜ್ವಾಕೆ, 'ಎ' ಕಾರವು 'ಯ' ಕಾರವಾಗಿ ಬಳಸಲ್ಪಡುತ್ತದೆ. ಮೇಲೆ–ಮ್ಯಾಲೆ, ಬೇಡ–ಬ್ಯಾಡ ವಿದ್ಯಾವಂತರು ಬಳಸುವುದು 'ಚ' ಕಾರಾದಿಯ ಪದಗಳು ಅವಿದ್ಯಾವಂತರಲ್ಲಿ 'ಸ' ಕಾರವಾಗಿ ಬಳಕೆಯಾಗುತ್ತದೆ. ಗಿಣ್ಣು–ಜಿಣ್ಣು, ಜಿಡ್ಡು–ಗಿಡ್ಡು, ಗೆರೆ–ಜೆರೆ, ಗೆಂಡೆ–ಜೆಂಡೆ, ಆಲೂಗೆಡ್ಡೆಯನ್ನು ಎನ್ನವುದನ್ನು 'ಆಲ್ಮೆಜೆಂಡೆ' ಎನ್ನುವರು.

ಇನ್ನು ಮುಂದೆ ಎಂದು ಹೇಳಲೂ 'ಇಪಟ್ಟು' ಎಂದು ಬಳಸುವರು. ಸ್ವಲ್ಪ ಎನ್ನುವುದಕ್ಕೆ ಸಟೀಗೆ, ರವೋಟು, ಮುಂತಾದ ಪದಗಳನ್ನು ಹೆಚ್ಚು ಬಳಸುತ್ತಾರೆ. ತೆಳುವಾಗಿರುವವರನ್ನು ಸೆಣ್ಕೆಯಾಗವರೆ, ಸಿಲಬ ಆಗವರೆ ಎಂದು ಕರೆಯುತ್ತಾರೆ.

ಇಂಗ್ಲಿಷ್ ಭಾಷೆಯ ಪದಗಳನ್ನು ಉಚ್ಚರಿಸುವಾಗ ಸ್ವರಾಂತ್ಯಗಳಿಗೆ ಮಾಡಿಕೊಂಡು ಹೇಳುವುದು ಸಾಮಾನ್ಯ ಉದಾಹರಣೆ ಗ್ಲಾಸ್–ಗಳಾಸು, ಸ್ಟೇಷನ್–ಟೇಸನ್, ಸ್ಕೂಲ್– ಇಸ್ಕೂಲ್ ಇತ್ಯಾದಿ. ಈ ರೀತಿಯ ಭಾಷೆಯಾನ್ನಾಡುವ ಅನಕ್ಷರಸ್ಥರು, ಗ್ರಾಮೀಣರು ಸಾಮಾನ್ಯವಾಗಿ ಮಾಡಿಕೊಳ್ಳುವ ಬದಲಾವಣೆಯಾಗಿವೆ. ಜಿಪುಣರನ್ನು ಕುರಿತು 'ಕೊಣವೇಗೌಡ' ಇತ್ಯಾದಿ ನುಡಿಗಟ್ಟು ಬಳಸುತ್ತಾರೆ.

ಮುಸ್ಲಿಂ ಭಾಷೆ ಮುಸ್ಲಿಂ ಕನ್ನಡದ ರೀತಿಯು ಬೇರೆ ಇದೆ. ಆದರೆ ಅವರು ಆಡುವ ಕನ್ನಡದಲ್ಲಿ 'ಕ' ಕಾರ 'ಚ' ಕಾರವಾಗಿಲ್ಲ ಅಥವಾ ಗ–ಜ ಆಗಿಲ್ಲ. ಹಿಂದೂ

ಧರ್ಮದವರಲ್ಲಿನ ಭಾಷೆಯಗಿರುವಷ್ಟು ವ್ಯತ್ಯಾಸವಾಗಿಲ್ಲ ಇಲ್ಲಿಯ ವಿಭಿನ್ನವಾದ ಮುಸ್ಲಿಂ ಕನ್ನಡ ಬಳಕೆಯಲ್ಲಿದೆ.

ಹೀಗೆ ಬೆಟ್ಟದಪುರದ ಭಾಷೆಯಲ್ಲಿ ಅನೇಕ ರೀತಿಯ ವಿಶಿಷ್ಟತೆಯನ್ನು ಗುರ್ತಿಸಬಹುದು. ಇದು ಭಾಷೆ ಅಧ್ಯಯನಕಾರರಿಗೆ ಅತ್ಯಂತ ಸೂಕ್ತ ಕೇಂದ್ರವಾಗಿದೆ.

** ** **

# ಅಧ್ಯಾಯ – 5

## ಸಾಹಿತ್ಯ ಸೇವೆ ಮತ್ತು ಮಹನೀಯರು

ಬೆಟ್ಟದಪುರವು ಪಿರಿಯಾಪಟ್ಟಣ ದೊಡ್ಡಯ್ಯನಂಥ ಮೇಲ್ಪಂಕ್ತಿಯ ಕವಿಯನ್ನು ನೀಡಿದ ಹೆಮ್ಮೆಯನ್ನು ಪಡೆದಿದೆ. ರಾವಂದೂರಿನ ದೇವಪ್ಪ, ಚಪ್ಪರದಹಳ್ಳಿ ಆದಿಮಪ್ಪ ಮುಂತಾದ ಕವಿಗಳು ಹಲವು ಕೃತಿಗಳನ್ನು ರಚಿಸಿದ್ದಾರೆ.

ಬೆಟ್ಟದಪುರದಲ್ಲಿರುವ ಆಧುನಿಕ ಬರಹಗಾರರಲ್ಲಿ ಮುಖ್ಯವಾದವಾರು ಬೆ.ಗೋ. ರಮೇಶ್ ಅವರು ಇವರ ಪುಸ್ತಕಗಳ ಸಂಖ್ಯಾಬಲದಿಂದ ತಾಲೂಕಿನಲ್ಲಿ ಹೆಚ್ಚು ಪುಸ್ತಕಗಳನ್ನು ಪ್ರಕಟಿಸಿದ ಬರಹಗಾರರೆನಿಸಿಕೊಂಡಿದ್ದಾರೆ. ಇವರು 40ಕ್ಕೂ ಹೆಚ್ಚು ಪುಸ್ತಕಗಳನ್ನು ರಚಿಸಿದ್ದಾರೆ.

ಪತ್ರಿಕೆಗಳಿಗೆ, ಸ್ಮರಣ ಸಂಚಿಕೆಗಳಲ್ಲಿ ಕಥೆ, ಕವನ, ವಿಮರ್ಶೆ, ಲೇಖನವನ್ನು ಬರೆಯುವ ಬರಹಗಾರರಿದ್ದಾರೆ. ಬೆಟ್ಟದಪುರ ಮಂಜುನಾಥ್, ಮೋಹನಕುಮಾರಿ ಅವರು ಹಾಗೂ ಇನ್ನಿತರರು ಈ ನಿಟ್ಟಿನಲ್ಲಿ ಸಾಹಿತ್ಯ ಕೃತಿಗೆ ಕೈ ಹಾಕಿದ್ದಾರೆ. ಹಲವರು ಪ್ರತಿಭೆಯುಳ್ಳವರಾಗಿದ್ದು ಅದನ್ನು ಸದ್ಬಳಕೆ ಮಾಡಿಕೊಳ್ಳುವತ್ತ ಸಾಗಬೇಕಾಗಿದೆ. ಮತ್ತೊಬ್ಬರು ಯುವ ಕವಿ ಎನ್. ಬಿ. ಕೃಷ್ಣಪ್ಪ ಇವರ ಚೊಚ್ಚಲ ಕವನ ಸಂಕಲನ **'ಕಮ್ಮೊರನ ಮೊನೆ'** ಯ ಮೂಲಕ ಪ್ರವೇಶಿಸಿದ್ದಾರೆ. ವಯೋಮಾನ ಸಹಜ ಪ್ರಕ್ರಿಯೆಗಳಿಗಿಂತ ಸುತ್ತ ಮುತ್ತಲಿನ ಬದುಕನ್ನು ಚಿತ್ತಿಸಿದ್ದಾರೆ.

ಹಿಂದೆ ಸಂಕೇತವಾಣಿ ಎಂಬ 'ಪತ್ರಿಕೆ' ಯು ಪ್ರಕಟವಾಗುತ್ತಿತು. ಇಂದು ಇಲ್ಲವಾಗಿದೆ ಎನ್ನಬಹುದು.

### *** ಬೆಟ್ಟದಪುರದ ಮಹನೀಯರು ***

**ಕೊಪ್ಪಲು ದೊಡ್ಡೇಗೌಡ**

ಇವರನ್ನು ಅಡಿಕೆ ದೊಡ್ಡಣ್ಣ ಎಂದು ಕರೆಯುವುದು ವಾಡಿಕೆ. ಮೂಲತಃ ಬೆಟ್ಟದಪುರದ ಮತ್ತು ಮಾಧ್ಯಮಿಕ ಶಾಲೆಗಳಿಗೆ ಶಾಲಾ ಕಟ್ಟಡ ನಿರ್ಮಿಸಲೂ ಜಾಗವನ್ನು ಉದಾರವಾಗಿ ಕೊಟ್ಟಿದ್ದಾರೆ.

**ಬಿ ಬಸಪ್ಪಶೆಟ್ಟರು**

ಇವರು ದಾನಧರ್ಮಗಳಿಗೆ ಎತ್ತಿದ ಕೈ. 1955 ರಲ್ಲಿ ನಿಜಲಿಂಗಪ್ಪ ನವರ ಕಾಲದಲ್ಲಿ ಬೆಟ್ಟದಪುರಕ್ಕೆ ಪ್ರೌಢಶಾಲೆ ಮಂಜೂರಾದಂತಹ ಸಂದರ್ಭದಲ್ಲಿ, ಉದಾರವಾಗಿ ಕಟ್ಟಡ ಕಟ್ಟಲೂ ಜಾಗವನ್ನು ದಾನವಾಗಿ ನೀಡಿದವರು. ಬೆಟ್ಟದಪುರದಲ್ಲಿರುವ ಸಂಯುಕ್ತ ಪದವಿ ಕಾಲೇಜು ಕಟ್ಟಡವು ಅಂದು ಜಿಲ್ಲಾ ಬೋರ್ಡ್ ಪ್ರೌಢಶಾಲೆ ಎಂಬ ಹೆಸರಿನಲ್ಲಿ ಶ್ರೀ ಜಯರಾಮರಾಜೇಂದ್ರ ಒಡೆಯರ್ ಬಹದ್ದೂರ್ ರವರಿಂದ ಇದೇ ದಾನವಾಗಿ ನೀಡಲ್ಪಟ್ಟ ಜಾಗದಲ್ಲಿ ಉದ್ಘಾಟನೆಗೊಂಡಿತ್ತು.

**ಬಿ.ವಿ. ಕೃಷ್ಣಪ್ಪ**

ಬೆಟ್ಟದಪುರದಲ್ಲಿ ಕಾನೂನುಗಳನ್ನು ಚೆನ್ನಾಗಿ ಅರಿತವರು ಆಗಿದ್ದರು. ಬೆಟ್ಟದಪುರದ ಅಟಾರ್ನಿ ಜನರಲ್ ಎಂದೇ ಪ್ರಸಿದ್ದವಾದವರು. ನ್ಯಾಯ ತೀರ್ಮಾನಗಳಲ್ಲಿ ಎತ್ತಿದ ಕೈ ಅದಕ್ಕಾಗಿಯೇ ಇವರಿಗೆ ಈ ಬಿರುದು ಇದ್ದಿದು. ಗ್ರಾಮ ಪಂಚಾಯಿತಿಯಲ್ಲಿ ಇವರ ಮಾತು ವೇದವಾಕ್ಯದಂತಿತ್ತು.

**ಬಿ.ಎನ್. ವೆಂಕಟಸುಬ್ರಮ್ಮಣ್ಯ**

ನಾರಾಯಣ ಸ್ವಾಮಿಗಳ ಮಗನಾಗಿದ್ದು, ಕೈಗಾರಿಕೋದ್ಯಮಿಗಳಾಗಿರುವ ಇವರು ಬೆಂಗಳೂರಿನಲ್ಲಿ ನೆಲೆಸಿದ್ದಾರೆ. ಬೆಟ್ಟದಪುರದ ಬ್ರಾಹ್ಮಣ ಸಮುದಾಯ ಭವನ ನಿರ್ಮಿಸಿಕೊಟ್ಟಿದ್ದಾರೆ. ಬೆಟ್ಟದ ಬುಡದಲ್ಲಿರುವ ಏಣಿ ಹನುಮಂತರಾಯನ ದೇವಸ್ಥಾನದ ಪುನರ್ನಿರ್ಮಾಣಕ್ಕೆ ಇವರು ಕಾರಣ ಕರ್ತರಾಗಿದ್ದಾರೆ.

**ವೀಣೆ ರಾಮಸ್ವಾಮಯ್ಯ**

ಇವರನ್ನು ಮಹಡಿ ಸ್ವಾಮಯ್ಯ ಎನ್ನುತ್ತಿದ್ದರು ಏಕೆಂದರೆ ಇವರದು ಮದ್ರಾಸ್ ತಾರಸಿ ಮಹಡಿ ಮನೆಯಾಗಿತ್ತು. ಇವರು ವೀಣೆಯಲ್ಲಿ ನೈಪುಣ್ಯ ಹೊಂದಿದ್ದರು. ಆದ್ದರಿಂದ ಇವರನ್ನು ವೀಣೆ ಸ್ವಾಮಯ್ಯ ಅಥವಾ ವೀಣೆ ರಾಮಸ್ವಾಮಯ್ಯ ಎನ್ನುತ್ತಿದ್ದರು.

**ಚೇರ್ಮನ್ ಬಿ.ಎನ್. ಶಾಮಣ್ಣ**

ಊರಿನ ಏಳ್ಗೆಗಾಗಿ ತುಂಬಾ ಶ್ರಮಿಸಿ ಹೆಸರುವಾಸಿಗಳಾಗಿದ್ದವರು. ಉದಾರಿ ದಾನಗುಣಶೀಲ ಸಂಪನ್ನರು ಜೀವಿತ ಅವಧಿಯಲ್ಲಿ ಒಮ್ಮೆಯೂ ಚಪ್ಪಲಿಮೆಟ್ಟದ

ಗಣ್ಯವಕ್ತಿ ಇವರು. ಮಾತು ತುಂಬಾ ನಯ, ಹಿತಮಿತವಾಗಿದ್ದು ಮಹಾಕಾರ್ಯ ಸಾಧಕವಾದುದಾಗಿತ್ತು. ಇವರು ಸಹಕಾರ ಸಂಘದ ಅಧ್ಯಕ್ಷರಾಗಿದ್ದರು ಅನಂತರ ಗ್ರಾಮದ ಉಪಾಧ್ಯಕ್ಷ ಹಾಗೂ ಅಧ್ಯಕ್ಷರಾಗಿ ಹಲವು ವರ್ಷಗಳ ಕಾಲ ಸೇವೆ ಸಲ್ಲಿಸಿದರು ಈಗಿರುವ ಬಸವೇಶ್ವರ ಕಾಲೋನಿ, ಸುಣ್ಣದ ಕೇರಿ, ಮುಸ್ಲಿಂ ಬೀದಿ ಇವೆಲ್ಲಾ ಇವರ ಕೊಡುಗೆಗಳಾಗಿವೆ.

**ಛೇರ್ಮನ್ ಡಿ. ತಮ್ಮಯ್ಯ**

ಖಾಸಗಿ ಪಾಲಾಗುತ್ತಿದ್ದ ಹಲವು ಸಾರ್ವಜನಿಕ ಸ್ಥಳಗಳನ್ನು ಉಳಿಸುವುದರ ಮೂಲಕ ಉಪಯುಕ್ತ ಸ್ಥಳಗಳಾಗುವಂತೆ ಮಾಡಿದರು.

**ಹಿರೇ ಮಳಲಿ ಚಿಕ್ಕೆ ಅರಸು**

1956 ರಲ್ಲಿ ಪಶುಗಳ ಚಿಕಿತ್ಸಾಲಯವನ್ನು ಕಟ್ಟಿಸುವುದರ ಮೂಲಕ ಊರಿನ ರೈತರಿಗೆ ಜಾನುವಾರುಗಳಿಗೆ ವೈದ್ಯಕೀಯ ಚಿಕಿತ್ಸೆ ಸಿಗುವಂತೇ ಮಾಡಿದರು.

**ಪಟೇಲ್ ದೊಡ್ಡಣ್ಣ ಶೆಟ್ಟರು**

ಊರಿನ ಉನ್ನತಿಗಾಗಿ ಶ್ರಮಿಸಿದವರಲ್ಲಿ ಇವರು ಕೂಡಾ ಒಬ್ಬರಾಗಿದ್ದಾರೆ. ಯಾವುದೇ ಸಾರ್ವಜನಿಕ ಕಾರ್ಯಕ್ಕೂ ಇವರು ಮುಂಚೂಣಿಯಲ್ಲಿದ್ದರು. ನುರಿತ ರಾಜಕಾರಣಿ, ಸುತ್ತಲ ಗ್ರಾಮಗಳಲ್ಲಿ ನ್ಯಾಯ ತೀರ್ಮಾನ ಮಾಡುವುದರಲ್ಲಿ ಸಿದ್ಧಹಸ್ತರಾಗಿದ್ದರು.

**ಕಸಬಾ ಶಾನುಭೋಗ ಬಿ.ಆರ್. ವೆಂಕಟರಾಮಯ್ಯ**

ಬೆಟ್ಟದಪುರದ ಸುತ್ತಮುತ್ತಲ್ಲಿನ ಹಳ್ಳಿಗಳ ಶ್ಯಾನುಭೋಗರ ವಾಸ್ತವ್ಯವು ಆಗಿದ್ದು ಇಲ್ಲಿ ಸುಮಾರು 16 ಜನ ಶ್ಯಾನು ಭೋಗರು ನೆಲೆಸಿದ್ದು ಇವರು ಸುಮಾರು 60 ವರ್ಷಗಳ ಕಾಲ ಶ್ಯಾನುಭೋಗ ವೃತ್ತಿಯನ್ನು ನಿರ್ವಹಿಸಿದರು. ಕಸಬಾ ಎಂದರೇ ಕೇಂದ್ರಸ್ಥಳ ಕಾಲ ನಂತರದಲ್ಲಿ ಗ್ರಾಮಲೆಕ್ಕಿಗರ ಹುದ್ದೆಯು ಬಂದಂತಹ ಸಮಯದಲ್ಲಿ ಪದತ್ಯಾಗ ಮಾಡಿದ್ದರು. ಪ್ರಾರಂಭದಲ್ಲಿ ಇವರು ಮೇಷ್ಟ್ರು ಆಗಿಯು ಕರ್ತವ್ಯ ನಿರ್ವಹಿಸಿದ್ದರು.

**ಬಿ.ಆರ್. ಕೃಷ್ಣಮೂರ್ತಿ**

ಪೂಟ್ ಲಾಯರ್ ಎಂದೇ ಖ್ಯಾತರಾಗಿದ್ದ ಬಿ. ರಾಮಾಸ್ವಾಮಯ್ಯ ರವರ ಪುತ್ರ. ಇವರು ಬೆಂಗಳೂರಿನ ಪ್ರತಿಷ್ಠಿತ ಬಿ.ಎ.ಎಲ್ ಕಂಪನಿಯಲ್ಲಿ ಮ್ಯಾನೇಜರ್ ಹುದ್ದೆ ಅಲಂಕರಿಸಿ, ಇಲ್ಲಿನ ಸುತ್ತ ಮುತ್ತಲ ಹಲವು ಅಕ್ಷರಸ್ಥ ಯುವಕರಿಗೆ ಕೆಲಸ ಕೊಡಿಸುವಲ್ಲಿ ಸಫಲರಾಗಿದ್ದರು. ದುರದೃಷ್ಟವಶಾತ್ ಈಜಿಪ್ಟಿನ ನೈಲ್ ನದಿಯಲ್ಲಿ ದುರ್ಮರಣಕ್ಕೆ ಈಡಾದರು.

**ತಾಯಮ್ಮನ ರಾಮೇಗೌಡ**

ಬೆಟ್ಟದಪುರದ ಅವಳಿ ಕೊಪ್ಪಲುಗಳಲ್ಲಿ ಒಂದಾದ ಅರಳಿ ಮರದ ಕೊಪ್ಪಲಿನ ಗಣ್ಯವ್ಯಕ್ತಿ. ಇವರು ಯಾವುದೇ ನ್ಯಾಯಗಳಿಗೆ ದೇವತಾ ಕೈಕಾರ್ಯಗಳಿಗೆ ಇವರು ನೇತೃತ್ವ ವಹಿಸುತ್ತಿದು, ಈ ಕೊಪ್ಪಲಿನ ಯಜಮಾನರಾಗಿದ್ದರು.

**ಯಜಮಾನ್ ಕರಿಮಂಜೇಗೌಡರು**

ಅರಳಿ ಮರದ ಕೊಪ್ಪಲಿನ ಮತ್ತೊಬ್ಬ ಗಣ್ಯ ವ್ಯಕ್ತಿ. ರಾಮೇಗೌಡರ ಸಂಬಂಧಿ ಈಗಿರುವ ಕೊಪ್ಪಲಿನ ನಿವಾಸಿಗಳಲ್ಲಿ ಇವರ ವಂಶದ ಸುಮಾರು 100 ವಿಭಕ್ತ ಕುಟುಂಬಗಳಿವೆ.

**ಚನ್ನನಾಯಕ**

ಅವಳಿ ಕೊಪ್ಪಲಾದ ಚನ್ನನಾಯಕನ ಕೊಪ್ಪಲಿನ ಯಜಮಾನರಾಗಿದ್ದರು. ಯಾವುದೇ ನ್ಯಾಯ ತೀರ್ಮಾನಗಳಿಗೆ ಸಿದ್ಧಹಸ್ತರಾಗಿದ್ದರು. ಇವರ ವಂಶದ ಹಲವು ವಿಭಕ್ತ ಕುಟುಂಬಗಳನ್ನು ನಾವು ಇಂದೂ ಕಾಣಬಹುದಾಗಿದೆ.

**ಛೇರ್ಮನ್ ಬಿ.ಸಿ.ನಾರಾಯಣಸ್ವಾಮಿ**

ಇವರು ದಿಡ್ಡಿ ಉಪಾಧ್ಯಕ್ಷ ವಂಶಜರು. ಇವರ ಪೂರ್ವಜರು ಜೋಡಿದಾರ್‌ರಾಗಿದ್ದರು, ನಿಸ್ವಾರ್ಥ ಗ್ರಾಮಾಧ್ಯಕ್ಷ ಎನಿಸಿಕೊಂಡಿದ್ದರು. ಇವರ ಆಗಿನ ಕಾಲದ ಮನೆಯ ಬೀಟೆ-ತೇಗದ ಕೆತ್ತನೆ ಕುಸುರಿಗಳಿಂದ ತುಂಬಿ ತುಳುಕುತ್ತಿತ್ತು. ಈ ಮನೆಯನ್ನು ನೋಡಲು ಹಲವರು ಹಾತೊರೆಯುತ್ತಿದರು. ಈಗ ಈ ಮನೆ ಸಂಪೂರ್ಣ ನೆಲಸಮವಾಗಿರುವುದು ವಿಷಾದದ ಸಂಗತಿಯಾಗಿದೆ.

**ಶ್ರೀನಿವಾಸ ಜೋಯಿಸರು**

ಹಿಂದೆ ಪ್ರತಿ ದೊಡ್ಡ ಊರಿಗೊಬ್ಬರು ಊರ ಜೋಯಿಸರು ಇರುತ್ತಿದ್ದದು ಸಾಮಾನ್ಯ. ಅಂತಹ ಜೋಯಿಸರುಗಳಲ್ಲಿ ಸರಳ, ವಿನಯ, ಸ್ವಭಾವದ ಶ್ರೀನಿವಾಸ ಜೋಯಿಸರು ಕೂಡಾ ಒಬ್ಬರಾಗಿದ್ದಾರೆ. ಧಾರ್ಮಿಕ ಕಾರ್ಯಗಳಲ್ಲಿ ಗುರು ಸ್ಥಾನದಲ್ಲಿದ್ದುಕೊಂಡು ನಡೆಸಿಕೊಡುತ್ತಿದ್ದರು.

**ಕೆ.ಶಾಮಣ್ಣ**

ವೃತ್ತಿಯಲ್ಲಿ ಕನ್ನಡ ಶಿಕ್ಷಕರು ಪ್ರವೃತಿಯಲ್ಲಿ ಅಂಚೆ ಚೀಟಿ ಮಾರಾಟಗಾರರು, ಗಮಕಿಗಳು ಆಗಿದ್ದ ಸಜ್ಜನರು.

**ಗಿರಿಮಲ್ಲ ಶೆಟ್ಟರು**

ಊರಿನ ಉಪಾಧ್ಯಕ್ಷರಾಗಿದ್ದವರು ಯಾವುದೇ ಕಾರ್ಯದಲ್ಲಿ ಮುಂದೆ ನಿಂತು ನಡೆಸುವ ಸ್ವಭಾವವನ್ನು ಹೊಂದಿದವರಾಗಿದ್ದರು. ರಂಗಭೂಮಿಯಲ್ಲಿ ಹೆಚ್ಚಿನ ಆಸಕ್ತಿಯನ್ನು ಹೊಂದಿ ಯಾವುದೇ ನಾಟಕದ ಅಭಿನಯದಲ್ಲಿ ಮುಂಚೂಣಿಯಲ್ಲಿ ಇರುತ್ತಿದ್ದರು.

**ನಜೀರ್ ಸಾಬ್**

ನಾಟಕಾಭಿನಯದಲ್ಲಿ ನಿಸ್ಸೀಮಾರಾಗಿದ್ದರು. ಪೌರಾಣಿಕ ನಾಟಕಗಳಲ್ಲಿ ರಾವಣ ಪಾತ್ರ ಹಾಗೂ ಕೌರವನ ಪಾತ್ರಗಳು ಇದರದೇ ಆಗಿದ್ದು 'ರಾವಳ' ಎಂದೇ ಇವರನ್ನು ಮುಸ್ಲಿಂ ಬಾಂಧವರು ಕರೆಯುತ್ತಿದ್ದರು.

**ಬಿ.ಪಿ.ಸೂರ್ಯನಾರಾಯಣ**

ಇವರು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕಿ ಕೇವಲ ಸಾಂಸ್ಕೃತಿಕ ಜಗತ್ತಿಗೆ ಮಾತ್ರ ಮೀಸಲಾಗಿದ್ದ ಸ್ಥಾನವನ್ನು ವ್ಯಾಪಕಗೊಳಿಸಿದರು. ಬೆಟ್ಟದಪುರದಲ್ಲಿ ಜನಿಸಿ ವಿದ್ಯಾಭ್ಯಾಸಕ್ಕಾಗಿ ಮೈಸೂರಿಗೆ ತೆರಳಿ ಕಾಲೇಜಿನಲ್ಲಿ ಓದುತ್ತಿದ್ದ ಸಂದರ್ಭದಲ್ಲಿ, ಸ್ವಾತಂತ್ರ್ಯ ಸಂಗ್ರಾಮದ ಕಾವು ಎಲ್ಲೆಡೆಯೂ ವ್ಯಾಪಿಸಿತು. ಇದರಿಂದ ಪ್ರಭಾವಿತರಾಗಿ 1942 ರಲ್ಲಿ ಭಾರತ ಬಿಟ್ಟು ತೊಲಗಿ ಚಳುವಳಿಯಲ್ಲಿ ಧುಮುಕಿ ಸಕ್ರಿಯವಾಗಿ ತೊಡಗಿಸಿಕೊಂಡರು. ಇದರ ಬಗ್ಗೆ ಮೈಸೂರಿನ ಹಲವು ಭಾಗಗಳಲ್ಲಿ ಪ್ರಚಾರ ಕೈಗೊಂಡರು. ಇದರಿಂದ ಬ್ರಿಟಿಷರ ಕೆಂಗಣ್ಣಿಗೆ ಗುರಿಯಾಗಿ ನಂತರ ವೃತ್ತಿ ಜೀವನದಲ್ಲಿ ತೊಡಗಿಕೊಂಡರು.

**ಡಾ.ಕೆ.ಆರ್.ತಮ್ಮಯ್ಯ**

ಬಡ ಬಗ್ಗರಿಗೆ ದೀನ ದಲಿತರಿಗೆ ಸೇವೆಯನ್ನು ನೀಡುವ ಮೂಲಕ ವೈದ್ಯ ವೃತ್ತಿಯಲ್ಲಿ ಸೈ ಎನಿಸಿ ಜನಮನ್ನಣೆಗಳಿಸಿದರು. ಗ್ರಾಮೀಣ ಪರಿಸರದಲ್ಲಿ ಓದಿ ವೈದ್ಯಕೀಯ ಪದವಿಯಂಥ ಉನ್ನತ ಶಿಕ್ಷಣ ಪಡೆದು ವೈದ್ಯ ವೃತ್ತಿಯ ಮೂಲಕ ಜನರ ಸೇವೆಗೆ ತಮ್ಮ ಜೀವನವನ್ನು ಅರ್ಪಿಸಿಕೊಂಡವರು.

**ರಂಗೇಗೌಡರು**

ಉಪ್ಪಾರ ಜನಾಂಗದ ಮುಖ್ಯಸ್ಥರು. ಶ್ರೀ ಸಿಡ್ಲುಮಲ್ಲಿಕಾರ್ಜುನಸ್ವಾಮಿ ಮೆರವಣಿಗೆ ದೀವಟಿಗೆ ಸೇವೆ ಹಾಗೂ ಗಿರಿ ಪ್ರದಕ್ಷಣೆಯ ಮುಖಂಡತ್ವವನ್ನು ಇವರು ವಹಿಸುತ್ತಿದ್ದರು. ಇವರ ಮಗ ಬಿ.ಆಂಜನೇಯ ಅವರು ಗ್ರಾಮದಲ್ಲಿ ಛೇರ್ಮನ್‌ರಾಗಿದ್ದು ಮಲ್ಲಿಕಾರ್ಜುನ ಸ್ವಾಮಿ ದೇವಸ್ಥಾನದ ಧರ್ಮದರ್ಶಿಗಳಾಗಿ ಸೇವೆ ಮಾಡಿ ಈಗಲೂ ದೇವಸ್ಥಾನದ ಧರ್ಮದರ್ಶಿ ಸಮಿತಿಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

** ** **

# ಅಧ್ಯಾಯ –6

## ಶಿಕ್ಷಣ, ವ್ಯಾಪಾರ–ವಾಣಿಜ್ಯ ವಿಚಾರಗಳು

ಶಿಕ್ಷಣವು ಮಾನವನ ಅವಿಭಾಜ್ಯ ಹಾಗೂ ಅತ್ಯವಶ್ಯವಾದ ಭಾಗವಾಗಿದೆ. ಯಾವುದೇ ಪ್ರದೇಶ ಹಾಗೂ ಜನರ ಅಭಿವೃದ್ಧಿ ಹಾಗೂ ಕ್ಷೇಮವು ಅಲ್ಲಿನ ಶಿಕ್ಷಣ ಮಟ್ಟವನ್ನು ಅವಲಂಬಿಸಿದೆ. ಶಿಕ್ಷಣವನ್ನು ಸುತ್ತಮುತ್ತಲಿನ ಗ್ರಾಮಗಳ ಜ್ಞಾನದಾಹಿಗಳಿಗೆ ಒದಗಿಸಿಕೊಡುವಲ್ಲಿ ಬೆಟ್ಟದಪುರವು ತನ್ನ ಮಟ್ಟಿಗೆ ಯಶಸ್ವಿಯಾಗಿದೆ ಎನ್ನಬಹುದು.

ಬೆಟ್ಟದಪುರವು ಧಾರ್ಮಿಕ ಕ್ಷೇತ್ರಗಳಲ್ಲಿ ತನ್ನದೇಯಾದ ವೈಶಿಷ್ಟ್ಯತೆಯನ್ನು ಹೊಂದಿದೆ. ಶ್ರೀ ಸಿಡ್ಲು ಮಲ್ಲಿಕಾರ್ಜುನ ಸ್ವಾಮಿಯ ದಿವ್ಯಧಾಮ. ಬೆಟ್ಟಗುಡ್ಡಗಳ ನಡುವೆ ಚಿಲಿಪಿಲಿ ಗಾನ, ಮನ–ದೇಹಕ್ಕೆ ಮುದ ನೀಡುತ್ತದೆ. ಇಲ್ಲಿನ ಈ ರೀತಿಯ ಸೊಬಗಿನಲ್ಲಿ ವಿದ್ಯೆಯನ್ನು ಪಡೆಯಲು ಬರುವ ಜನರೇ ಧನ್ಯರೆಂದು ಹೇಳಬಹುದು.

ಜ್ಞಾನವು ಒಂದು ಶಕ್ತಿಯಾಗಿದೆ ಇಂದಿನ ಈ ಯುಗದಲ್ಲಿ ಅಕ್ಷರ ಜ್ಞಾನವಿರುವವನಿಗೆ ಎಲ್ಲಿಯೂ ಮಾನ್ಯತೆಯಿರುತ್ತದೆ. ಈ ಜ್ಞಾನ ಅಥವಾ ಶಿಕ್ಷಣವನ್ನು ನೀಡುವವನೇ ಗುರುವಾಗಿದ್ದಾನೆ ಈ ಗುರುವಿನ ಕೈಯಲ್ಲಿ ದೇಶದ ಭಾವಿ ಭವಿಷ್ಯವು ನಿಂತಿರುತ್ತದೆ. ಇಂದಿನ ಮಕ್ಕಳೇ ಮುಂದಿನ ಪ್ರಜೆಗಳು ಹಾಗಾಗಿ ಅವರು ಸತ್ಪ್ರಜೆಗಳಾಗಿ ಬೆಳೆದು ಸಮಾಜದಲ್ಲಿ ಉತ್ತಮ ರೀತಿಯಲ್ಲಿ ಭವಿಷ್ಯ ರೂಪಿಸಿಕೊಳ್ಳಲು ಶಿಕ್ಷಣದ ಗುಣಮಟ್ಟವು ಉತ್ತಮವಾದ ಮಟ್ಟದಲ್ಲಿರಬೇಕು. ಆಗ ಮಾತ್ರ ನಿರೀಕ್ಷಿತ ಪ್ರಮಾಣದಲ್ಲಿ ಸಮಾಜವು ಉತ್ತಮವಾದ ಭವಿಷ್ಯವನ್ನು ಪಡೆಯುವಲ್ಲಿ ಸಫಲವಾಗಿತ್ತದೆ.

ಬೆಟ್ಟದಪುರದಲ್ಲಿ ಎರಡು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಒಂದು ಸರ್ಕಾರಿ ಪ್ರೌಢಶಾಲೆಯ ಜೊತೆಗೆ ಒಂದು ಪದವಿ ಪೂರ್ವ ಕಾಲೇಜು ಇದೆ. ಇದರ ಜೊತೆಗೆ ಖಾಸಗಿಯ ಶಿಕ್ಷಣ ಸಂಸ್ಥೆಗಳು ಕೂಡಾ ಕಾರ್ಯನಿರ್ವಹಿಸುತ್ತಿವೆ.

ಶ್ರೀ ಸಿಡ್ಲು ಮಲ್ಲಿಕಾರ್ಜುನ ವಿದ್ಯಾ ಸಂಸ್ಥೆಯು ಒಂದು 1990 ರ ದಶಕದಲ್ಲಿ ಪ್ರಾರಂಭ ಇದು ಇಂದು ಪ್ರಾಥಮಿಕ, ಪ್ರೌಢಶಾಲೆಯನ್ನು ಹೊಂದಿದ್ದು, ಇಲ್ಲಿ ಕನ್ನಡ ಮಾಧ್ಯಮ ಹಾಗೂ ಇಂಗ್ಲಿಷ್ ಮಾಧ್ಯಮದಲ್ಲಿ ಶಿಕ್ಷಣವನ್ನು ಕೊಡಲಾಗುತ್ತಿದೆ. ಹತ್ತಾರು ಸಂಖ್ಯೆಯ ಭೋದಕ ವೃಂದವನ್ನು ಹೊಂದಿ ಸುತ್ತಮುತ್ತಲ ಗ್ರಾಮಗಳ ಜನರಲ್ಲಿ

ಮನಸ್ಸಿನಲ್ಲಿ ಅಚ್ಚಳಿಯದ ಭಾವನೆಯನ್ನು ಮೂಡಿಸಿದೆ. ಎಂದರೆ ತಪ್ಪಾಗಲಾರದು ಎಂದು ಹೇಳಬಹುದು. ಈ ಶಿಕ್ಷಣ ಸಂಸ್ಥೆಯು ಬಿ.ವಿ. ಮಂಜುನಾಥ್‌ರವರ ಮುಂದಾಳತ್ವದಲ್ಲಿ ಸಾಗುತ್ತಿದ್ದು ಜ್ಞಾನ ಪ್ರಸಾರಕ್ಕಾಗಿ ಹಗಲಿರುಳು ತಮ್ಮ ಜೀವನ ಮುಡಿಪಿಟ್ಟು ಶ್ರಮಿಸುತ್ತಿದ್ದಾರೆ. ಈ ಶಿಕ್ಷಣ ಕೇಂದ್ರವು ಮಲ್ಲಿಕಾರ್ಜುನ ದೇವಾಲಯದ ಉತ್ತರ ಭಾಗದಲ್ಲಿ ವಿಸ್ತಾರವಾದ ಪ್ರದೇಶದಲ್ಲಿ ಇದ್ದು ಸುಸಜ್ಜಿತವಾದ ಕಟ್ಟಡದ ಜೊತೆಗೆ ವಿಸ್ತಾರವಾದ ಆಟದ ಮೈದಾನ ನುರಿತ ಶಿಕ್ಷಕ ವೃಂದವನ್ನು ಹೊಂದಿದೆ ವಾಹನ ಸೌಕರ್ಯವನ್ನು ಹೊಂದಿದೆ.

ಮತ್ತೊಂದು ಶಿಕ್ಷಣ ಪ್ರಸಾರ ಮಾಡುತ್ತಿರುವ ಖಾಸಗಿ ಶಿಕ್ಷಣ ಸಂಸ್ಥೆಯೆಂದರೇ ಶ್ರೀ ಗಳ ಮಠ ಇದು ಪ್ರೌಢಶಾಲೆಯನ್ನು ಹೊಂದಿದ್ದು ಬೆಟ್ಟದಪುರ ಕೇಂದ್ರ ಭಾಗದಿಂದ 1 ಕಿಮೀ ಅಂತರದಲ್ಲಿದೆ. ಇಲ್ಲಿ ಉತ್ತಮವಾದ ಪರಿಸರವಿದೆ. ವಿದ್ಯಾರ್ಥಿಗಳಿಗೆ ಉತ್ತಮವಾದ ಕಟ್ಟಡ ವಿಸ್ತಾರವಾದ ಮೈದಾನ ಹಾಗೂ ನುರಿತ ಶಿಕ್ಷಕ ವೃಂದವನ್ನು ಹೊಂದಿದೆ. ಕಲಿಯುವವರಿಗೆ ಉತ್ತಮವಾದ ಶಾಂತ ವಾತಾವರಣವನ್ನು ಕಲ್ಪಿಸಿದೆ.

ಬೆಟ್ಟದಪುರದ ಮತ್ತೊಂದು ಪ್ರಖ್ಯಾತವಾದ ಶಿಕ್ಷಣ ಸಂಸ್ಥೆಗಳಲ್ಲಿ ತಮ್ಮಯ್ಯ ಸ್ಮಾರಕ ನವೋದಯ ಶಾಲೆ ಇದು ಪಿರಿಯಾಪಟ್ಟಣ ರಸ್ತೆಯಲ್ಲಿ ಸ್ಥಾಪನೆಗೊಂಡಿದೆ. ಇಲ್ಲಿ ಕನ್ನಡ ಮತ್ತು ಆಂಗ್ಲ ಮಾಧ್ಯಮದಲ್ಲಿಯೂ ಬೋಧನೆ ಮಾಡುವ ಪ್ರಾಥಮಿಕ ಹಾಗೂ ಪ್ರೌಢಶಾಲೆಯೂ ಇದೆ. ಇಲ್ಲಿಯೂ ನೂರಾರು ಸಂಖ್ಯೆಯ ವಿದ್ಯಾರ್ಥಿಗಳಿದ್ದು ಸಕಲವಾದ ಸಜ್ಜಿತವಾದಾದಗಿದೆ. ಪ್ರಸ್ತುತ ಸಾರಿಗೆ– ಸಂಪರ್ಕ ವ್ಯವಸ್ಥೆಯನ್ನು ಕೂಡಾ ಹೊಂದಿದೆ. ಹಾಗೆಯೇ ಸರ್ವೋದಯ ಐ.ಟಿ.ಐ ಕಾಲೇಜು ಇದೆ. ಇವುಗಳ ಜೊತೆಗೆ ಚಾಣಕ್ಯ ಶಿಕ್ಷಣ ಟ್ರಸ್ಟ್ ಕೂಡಾ ಬೆಟ್ಟದಪುರದಲ್ಲಿ ಸ್ಥಾಪಿತಗೊಳ್ಳುತ್ತಿದ್ದು, ಉತ್ತಮವಾದ ಶಿಕ್ಷಣ ಪ್ರಸಾರವನ್ನು ಮಾಡುವಲ್ಲಿ ತಾನು ಕೂಡಾ ಕೈಗೂಡಿಸಿದೆ. ಹಾಗೆ ಪ್ರಥಮ ದರ್ಜೆ ಕಾಲೇಜೊಂದರ ಆವಶ್ಯಕತೆಯು ಇದೆ.

## *** ವ್ಯಾಪಾರ ಮತ್ತು ವಾಣಿಜ್ಯದ ವಿಚಾರಗಳು ***

ಪ್ರತಿಯೊಬ್ಬರು ಜೀವನ ನಿರ್ವಹಣೆಗಾಗಿ ಯಾವುದಾದರೂ ಕಸುಬುಗಳನ್ನು ಮಾಡುವುದು ಅನಿವಾರ್ಯ. ಬೆಟ್ಟದಪುರದಲ್ಲಿ ಹಲವಾರು ಜಾತಿ ಜನಾಂಗಗಳಿವೆ. ಹಾಗಾಗಿ ಹಲವು ಬಗೆಯ ವೃತ್ತಿಕೌಶಲ್ಯಗಳ ಕೇಂದ್ರವಾಗಿದೆ. ಅಲ್ಪಪ್ರಮಾಣದಲ್ಲಿ

ಬಡವರು–ಶ್ರೀಮಂತರು ಇದ್ದಾರೆ. ಬಹುಪಾಲು ಮಾಧ್ಯಮ ವರ್ಗದ ಜನರ ಸಂಖ್ಯೆಯೇ ಅಪಾರವಾಗಿದೆ. ಇಲ್ಲಿನ ಸುಮಾರು 60 ರಿಂದ 70 ರಷ್ಟು ಮಂದಿ ಜನರು ಜೀವನೋಪಾಯಕ್ಕಾಗಿ ವ್ಯವಸಾಯವನ್ನೇ ಅವಲಂಬಿಸಿದ್ದಾರೆ. ತೆಂಗು, ತಾಳೆ, ಬಾಳೆ, ಮಾವು, ಸಪೋಟ, ಅಡಿಕೆ ಮುಂತಾದ ತೋಟದ ಬೆಳೆಗಳನ್ನು ಬೆಳೆಯುತ್ತಾರೆ.ಬಹುಮುಖ್ಯವಾಗಿ ಆರ್ಥಿಕ ಬೆಳೆಯಾದ ತಂಬಾಕನ್ನು ಹೆಚ್ಚಾಗಿ ಬೆಳೆಯುವರು. ಅವರೆ, ಹುರುಳಿ, ತಡಣಿ(ಅಲಸಂದೆ) ಮುಂತಾದ ಬೇಳೆಕಾಳುಗಳನ್ನು, ನೆಲಗಡಲೆ, ಎಳ್ಳು, ಉಚ್ಚೆಳ್ಳು, ಎಣ್ಣೆಕಾಳುಗಳನ್ನು ಬೆಳೆಯುತ್ತಾರೆ. ಇತ್ತೀಚೆಗೆ ಪಶುಸಂಗೋಪನೆಯಿಂದಾಗಿ ಹಾಲು ಮತ್ತು ಹಾಲಿನ ಉತ್ಪನ್ನಗಳ ತಯಾರಿಯು ಈ ಮಧ್ಯೆ ನಡೆಯುತ್ತಿದೆ. ಇಲ್ಲಿನ ಪ್ರಮುಖ ಆರ್ಥಿಕ ಚಟುವಟಿಕೆಯಲ್ಲಿ ಪ್ರತಿ ಭಾನುವಾರ ಸೇರುವ ಸಂತೆಯೂ ಒಂದಾಗಿದೆ. ಈ ಸಂತೆಯಲ್ಲಿ ತರಕಾರಿಗಳು, ಧವಸ ಧಾನ್ಯಗಳನ್ನು ಮಾರಲು ಸುತ್ತಮುತ್ತಲಿನ ಗ್ರಾಮಸ್ಥರೂ ಆಗಮಿಸುವರು. ಇತ್ತೀಚೆಗೆ ಕುರಿ, ಕೋಳಿ, ಎಮ್ಮೆ ಹಸು ಮುಂತಾದ ಪ್ರಾಣಿಗಳ ಮಾರಾಟವೂ ಸಹಾ ಈ ಸಂತೆಯಲ್ಲಿ ಜರುಗುತ್ತಿವೆ. ಇದು ಸುತ್ತಮುತ್ತಲಿನ 30–35 ಹಳ್ಳಿಗಳ ಗ್ರಾಮಸ್ಥರಿಗೆ ಮಾರಾಟ–ಕೊಳ್ಳುವಿಕೆಗೆ ಪ್ರಶಸ್ತವಾದ ಸೂಕ್ತವಾದ ಸ್ಥಳವಾಗಿದ್ದು, ಇಡೀ ಜಿಲ್ಲೆಯಲ್ಲಿಯೇ ಅತಿ ದೊಡ್ಡ ಸಂತೆ ಎಂಬ ಹೆಸರನ್ನು ಹೊಂದಿದೆ. ಕೃಷಿಕರನ್ನು ಹೊರತುಪಡಿಸಿದರೆ ಉಳಿದವರು ಬಹುಪಾಲು ವ್ಯಾಪಾರ–ವಹಿವಾಟುಗಳನ್ನು ನಡೆಸುತ್ತಾರೆ. ದಿನಸಿ ಅಂಗಡಿ, ಜನರಲ್ ಸ್ಟೋರ್, ಮೆಕಾನಿಕಲ್ ಶಾಪ್ ಮಾಂಸದ ಅಂಗಡಿ, ಚಿನ್ನ–ಬೆಳ್ಳಿಯ ವ್ಯಾಪಾರದ ಅಂಗಡಿಗಳನ್ನು ಕಾಣಬಹುದು. ಇಲ್ಲಿಸರ್ಕಾರದ ಉದ್ಯೋಗದಲ್ಲಿನ ಉದ್ಯೋಗಿಗಳು ಇದ್ದಾರೆ. ಕುಂಬಾರಿಕೆ, ನೇಯ್ಗೆಯಂತಹ ಗುಡಿ ಕೈಗಾರಿಕೆಗಳು ಹೇಳ ಹೆಸರಿಲ್ಲದಂತೆಯೇ ನಾಶವಾಗಿದೆ. ಬಡಗಿ, ಚಮ್ಮಾರಿಕೆಯ ಕೆಲಸವು ಪ್ರಸ್ತುತ ಚಾಲ್ತಿಯಲ್ಲಿದೆ. ಹೀಗೆ ಆರ್ಥಿಕವಾಗಿ ವಿಭಿನ್ನ ಸ್ತರಗಳ ಜೊತೆಗೆ ತನ್ನದೇ ಆದ ಆರ್ಥಿಕ ಹಿನ್ನಲೆಯನ್ನು ಹೊಂದಿದೆ.

** ** **

# ಅಧ್ಯಾಯ –7

# ಅಧ್ಯಯನದ ಫಲಿತಗಳು

1. ಕರ್ನಾಟಕದ ವಿವಿಧ ರಾಜಮನೆತನಗಳ ತವರು ಮನೆಯಾಗಿದ್ದು, ಆಡಳಿತದ ಗಣಿಯಾಗಿದೆ ಶಿಲ್ಪ ಕಲೆಯ ತವರೂರಾಗಿದೆ. ಮೈಸೂರು ಜಿಲ್ಲೆಯ ಪಿರಿಯಾಪಟ್ಟಣ ತಾಲ್ಲೂಕಿನ ಬೆಟ್ಟದಪುರ ಕ್ಷೇತ್ರ ಪ್ರಮುಖ ಯಾತ್ರಾ ಹಾಗೂ ಧಾರ್ಮಿಕ ಸ್ಥಳವಾಗಿದೆ.

2. ಬೆಟ್ಟದಪುರದ ಮಹತ್ವ ಇಲ್ಲಿನ ಬೆಟ್ಟ ಮಲ್ಲಿಕಾರ್ಜುನ ಬೆಟ್ಟದ ವಿಶೇಷತೆ, ತೊಡುಗಲ್ಲು ದನಗಳ ಜಾತ್ರೆ, ಬ್ರಹ್ಮರಥೋತ್ಸವ, ವಿವಿಧ ಧಾರ್ಮಿಕ ಆಚರಣೆಗಳ ಪ್ರಾಮುಖ್ಯ ತಿಳಿಯಲಾಯಿತು.

3. ಬೆಟ್ಟದಪುರದ ಐತಿಹಾಸಿಕ ವಿಷಯವನ್ನು ತಿಳಿಯಲಾಯಿತು. ಬೆಟ್ಟದಪುರಕ್ಕೆ ಸಂಬಂಧಿಸಿದಂತೆ ಸಿಕ್ಕಂತಹ ವಿವಿಧ ಶಾಸನಗಳ ಹಿನ್ನೆಲೆಯೊಂದಿಗೆ ಪ್ರಾಚೀನತೆಯನ್ನು ಮಹತ್ವವನ್ನು ಅರಿಯಲಾಯಿತು.

4. ಬೆಟ್ಟದಪುರದ ಆಗ್ನೇಯಕ್ಕಿರುವ ಮಲ್ಲಯ್ಯನ ಬೆಟ್ಟದಿಂದಲೇ ಬೆಟ್ಟದಪುರ ಎಂದು ಹೆಸರು ಬರಲೂ ಕಾರಣವಾಯಿತು ಎಂದು ತಿಳಿಯಲಾಯಿತು.

5. ಬೆಟ್ಟದಪುರಕ್ಕೆ ಭೈರವಪುರ ಎಂದು ಕರೆಯಲಾಗುತ್ತಿತ್ತು ಎಂಬುದಕ್ಕೆ ಇಲ್ಲಿನ ಚಂಗಾಳ್ವ ದೊರೆಗಳ ಬಗ್ಗೆ ಮತ್ತು ಭೈರವ ಸಂಸ್ಕೃತಿ ಬಗ್ಗೆ ತಿಳಿಯಲಾಯಿತು.

6. ಶ್ರೀ ಸಿಡ್ಲು ಮಲ್ಲಿಕಾರ್ಜುನ ಸ್ವಾಮಿ ಬೆಟ್ಟಕ್ಕೆ ಹಿಂದೆ ಕರೆಯುತ್ತಿದ್ದು ತೀರ್ಥಂಕರ ಬೆಟ್ಟ, ಕುಡುಚಾದ್ರಿ, ವಿಜಯಗಿರಿ ಮುಂತಾದ ಹೆಸರುಗಳ ಬಗ್ಗೆ ತಿಳಿಯಲಾಯಿತು.

7. ಬೆಟ್ಟದಪುರದ ಸುತ್ತಲಿನ ಗೊರಹಳ್ಳಿ, ತುಂಗಾ, ಅರಳಿ ಮರದ ಕೊಪ್ಪಲು, ಹರದೂರುಗಳ ಬಗ್ಗೆ ಸಮೀಕ್ಷೆ ನಡೆಸಲಾಯಿತು.

8. ಬೆಟ್ಟದಪುರದಲ್ಲಿನ ಬೆಟ್ಟವು ಸಮುದ್ರ ಮಟ್ಟದಿಂದ 4,389 ಅಡಿ ಎತ್ತರದಲ್ಲಿದ್ದು, ಮೈಸೂರು ಜಿಲ್ಲೆಯಲ್ಲಿಯೇ ಅತ್ಯಂತ ಎತ್ತರವಾದ ಕಡಿದಾದ ಬೆಟ್ಟವಾಗಿದೆ ಎಂಬುದನ್ನು ತಿಳಿಯಲಾಯಿತು.

9. ಸಿಡಿಲು ಮಲ್ಲಿಕಾರ್ಜುನ ಬೆಟ್ಟದ ದ್ವಾರ ಮಂಟಪವು ವಿಜಯನಗರ ಕಾಲದ ಶೈಲಿಯಲ್ಲಿ ಕಟ್ಟಲ್ಪಟ್ಟಿದೆ. ಬೆಟ್ಟವು ಸುಮಾರು 3108 ಕಲ್ಲು ಮೆಟ್ಟಿಲುಗಳನ್ನು ಹೊಂದಿದೆ ಎಂಬುದನ್ನು ತಿಳಿಯಲಾಯಿತು .

10. ಬೆಟ್ಟದಪುರವು ಮೊದಲು ವಿಜಯನಗರದ ಆಳ್ವಿಕೆಗೂ ಆನಂತರ ಚಂಗಾಳ್ವ ದೊರೆಗಳ ಆಳ್ವಿಕೆಗೂ ಮತ್ತು ಮೈಸೂರು ಅರಸರ ಆಳ್ವಿಕೆಗೂ ಒಳಪಟ್ಟಿತ್ತು ಎಂಬುದನ್ನು ತಿಳಿಯಲಾಯಿತು.

11. ಬೆಟ್ಟದಪುರದ ಸಾಂಸ್ಕೃತಿಕ ವೈಶಿಷ್ಟ್ಯಗಳ ಬಗ್ಗೆ ತಿಳಿಯಲಾಯಿತು, ಇಲ್ಲಿನ ಸಾಹಿತ್ಯ, ಭಾಷೆಯ ಪರಿವರ್ತನೆಯ ಬಗ್ಗೆ ತಿಳಿಯಲಾಯಿತು.

12. ಜೈನರು ಮೊದಲು ಜೈನ ಕೇಂದ್ರವನ್ನಾಗಿ ಮಾಡಿಕೊಂಡಿದ್ದನ್ನು ಇದಕ್ಕೆ ಪುಷ್ಟಿ ನೀಡುವಂತೆ ಇಲ್ಲಿನ ಸುತ್ತಮುತ್ತಲ ಗ್ರಾಮಗಳಲ್ಲಿ ಇರುವ ಜೈನ ಬಸದಿಗಳ ಸಾಕ್ಷ್ಯಾಧಾರಗಳ ಬಗ್ಗೆ ತಿಳಿಯಲಾಯಿತು.

13. ಸಿಡಿಲು ಮಲ್ಲಿಕಾರ್ಜುನ ಸ್ವಾಮಿ ದೇವಾಲಯವು ಮೊದಲು ಜೈನ ಬಸದಿಯಾಗಿದ್ದು, 14ನೇಯ ಶತಮಾನದಿಂದೀಚೆಗೆ ಶೈವ ಪಂಥಕ್ಕೆ ಸೇರ್ಪಡೆಯಾಯಿತೆಂದು ಎಂಬುದನ್ನು ತಿಳಿಯಲಾಯಿತು.

14. ಬೆಟ್ಟದಪುರ ಶ್ರೀ ಚಿಕ್ಕವೀರದೇಶಿಕೇಂದ್ರ ಮಠದ ಹಿನ್ನೆಲೆ, ಮಹತ್ವ ಮತ್ತು ಮಹತ್ಕಾರ್ಯಗಳ ಬಗ್ಗೆ ತಿಳಿಯಲಾಯಿತು.

15. ಬೆಟ್ಟದಪುರದ ಶ್ರೇಯಾಭಿವೃದ್ಧಿಗೆ ಶ್ರಮಿಸಿದ ಹಲವಾರು ಬೆಟ್ಟದಪುರದ ಮಹನೀಯರುಗಳ ಬಗ್ಗೆ ತಿಳಿಯಲಾಯಿತು.

16. ಧಾರ್ಮಿಕ ಮತ್ತು ಸಾಮಾಜಿಕ ಚೌಕಟಿನಲ್ಲಿ ಬೆಟ್ಟದಪುರದ ಸುತ್ತಮುತ್ತಲಿನ ಜನ ಸಮುದಾಯಯದ ಕುರಿತು, ಗ್ರಾಮಗಳ ಜನಸಂಖ್ಯೆ, ಜನಸಂಖ್ಯಾ ಅನುಪಾತ, ಸಮಾಜಿಕ ಪದ್ಧತಿಗಳಾದ ಜಾತಿಪದ್ಧತಿ, ಆಹಾರ ಪದ್ಧತಿ, ಉಡುಗೆ-

ತೊಡುಗೆಗಳು, ಆಚರಿಸುವಂತಹ ಹಬ್ಬಗಳು ವಿವಾಹ ಪದ್ಧತಿಗಳ ಬಗ್ಗೆ ಅಂತಯೇ ಧಾರ್ಮಿಕ ಆಚರಣೆಗಳ ಬಗ್ಗೆಯೂ ಅರಿತುಕೊಳ್ಳಲಾಯಿತು.

17. ಮಲ್ಲಿಕಾರ್ಜುನ ಸ್ವಾಮಿ ದೇವಸ್ಥಾನ, ಆಂಜನೇಸ್ವಾಮಿ ದೇವಸ್ಥಾನ, ಭ್ರಮರಾಂಭಾ(ಪಾರ್ವತಿ) ದೇವಾಲಯದ ಬಗ್ಗೆ ಕೋಡುಗಲ್ಲುಗಳು, ಗಾಳಿಮಂಟಪ, ದೀವಟಿಗೆ ಸೇವೆಗಳ ಬಗ್ಗೆ ತಿಳಿಯಲಾಯಿತು.

18. ಶಿಕ್ಷಣ ಸಂಸ್ಥೆಗಳ ಬಗೆಗೆ ತಿಳಿಯಲಾಯಿತು ಮತ್ತು ಶಿಕ್ಷಣ ಪ್ರಸಾರದಲ್ಲಿ, ಅವುಗಳು ಮಾಡುತ್ತಿರುವ ಕಾರ್ಯದ ಬಗ್ಗೆ ಕಲೆ ಹಾಕಲಾಯಿತು.

19. ಬೆಟ್ಟದಪುರದಲ್ಲಿನ ಜನರು ಅವಲಂಬಿಸಿರುವ ಉದ್ಯೋಗವನ್ನು ವಿವಿಧ ಬೆಳೆಗಳು, ಮಣ್ಣು, ವಾತಾವರಣ, ವ್ಯಾಪಾರ ವಹಿವಾಟು ಬಗ್ಗೆ ತಿಳಿಯಲಾಯಿತು.

20. ಬೆಟ್ಟದಪುರದಲ್ಲಿ ಏಳಿಗೆ ಹೊಂದಿದ ಜೈನ್, ಶಿವ ಮತ್ತು ವೈಷ್ಣವ ಧರ್ಮಗಳ ಬಗೆಗೆ ತಿಳಿಯಲಾಯಿತು.

21. ಚಂಗಾಳ್ವರು ವಿಜಯನಗರ ಸಾಮ್ರಾಜ್ಯದೊಂದಿಗೆ ಹೊಂದಿದ ಸಂಬಂದಗಳ ಬಗೆಗೆ ತಿಳಿಯಲಾಯಿತು.

22. ಇಲ್ಲಿನ ಜನರ ನಂಬಿಕೆಗಳು, ಹರಕೆಗಳ ಬಗೆಗೆ ತಿಳಿಯಲಾಯಿತು

23. ಹಿಂದುಗಳು, ಮುಸ್ಲಿಮರು ಆಚರಿಸುವ ವಿವಿಧ ಹಬ್ಬಗಳ ಬಗೆಗೆ ತಿಳಿಯಲಾಯಿತು.

## ಅನುಬಂಧಗಳು:

i) ಕ್ಷೇತ್ರಕಾರ್ಯ ವಿವರ

**ii)** ಪರಾಮರ್ಶನ ಗ್ರಂಥಗಳು

iii) ಛಾಯಾಚಿತ್ರಗಳು

iv) ಬೆಟ್ಟದಪುರದ ನಕ್ಷೆ

** ಕ್ಷೇತ್ರ ಕಾರ್ಯ ನಡೆಯಿಸಿದ ಮಾಹಿತಿ ತಃಖ್ತೆ **

| ಕ್ರ.ಸಂ | ವಕ್ತೃವಿನ ಹೆಸರು | ಪುರುಷ / ಮಹಿಳೆ | ವಯಸ್ಸು | ವೃತ್ತಿ | ವಿದ್ಯಾಭ್ಯಾಸ | ಸ್ಥಳೀಯರೇ / ಹೊರಗಿನವರೇ | ಷರಾ |
|---|---|---|---|---|---|---|---|
| 1 | ಜಗದೀಶ್ ಬಿ.ಜಿ | ಪುರುಷ | 64 | ನಿವೃತ್ತಶಿಕ್ಷಕರು | ಬಿ.ಎಡ್, ಎಂ.ಎ | ಸ್ಥಳೀಯರು | |
| 2 | ಪುನೀತ ಬಿ.ಜೆ | ಪುರುಷ | 28 | ಶಿಕ್ಷಕರು | ಬಿ.ಎಡ್, ಎಂ.ಎ | ಸ್ಥಳೀಯರು | |
| 3 | ನಾಗೇಂದ್ರ | ಪುರುಷ | 26 | ಕೃಷಿಕರು | ಮೆಟ್ರಿಕುಲೇಷನ್ | ಸ್ಥಳೀಯರು | |
| 4 | ಪ್ರಭಾಶಂಕರ್ | ಪುರುಷ | 49 | ಧರ್ಮದರ್ಶಿ ಸಂಚಾಲಕ | ಬಿ.ಎ | ಸ್ಥಳೀಯರು | |
| 5 | ಕೆ.ಆರ್. ಮಲ್ಲಯ್ಯ | ಪುರುಷ | 52 | ಧರ್ಮದರ್ಶಿ ಸಂಚಾಲಕ | ಪಿ.ಯು.ಸಿ | ಸ್ಥಳೀಯರು | |
| 6 | ಶ್ರೀಮತಿ ಉಷಾರಾಣಿ | ಮಹಿಳೆ | 53 | ಗೃಹಿಣಿ | ಬಿ.ಎ | ಸ್ಥಳೀಯರು | |
| 7 | ಶ್ರೀಮತಿ ಪುಷ್ಪಲತಾ | ಮಹಿಳೆ | 52 | ಸದಸ್ಯರು | ಎಸ್.ಎಸ್.ಎಲ್.ಸಿ | ಸ್ಥಳೀಯರು | |
| 8 | ಸಿ.ಕೆ. ಅನಂತರಾಮಯ್ಯ | ಪುರುಷ | 64 | ಅರ್ಚಕರು | ಪಿ.ಯು.ಸಿ | ಸ್ಥಳೀಯರು | |
| 9 | ಬಿ.ಎನ್ ರಾಮಚಂದ್ರ ರಾವ್ | ಪುರುಷ | 74 | ಅರ್ಚಕರು | ಪಿ.ಯು.ಸಿ | ಸ್ಥಳೀಯರು | |
| 10 | ಬಿ.ಎಸ್. ರವೀಶ್ | ಪುರುಷ | 32 | ಅರ್ಚಕರು | 9ನೇತರಗತಿ | ಸ್ಥಳೀಯರು | |
| 11 | ಬಿ.ವಿ. ಮಂಜುನಾಥ್ | ಪುರುಷ | 63 | ನಿವೃತ್ತಶಿಕ್ಷಕರು | ಎಂ.ಎ, ಬಿ.ಎಡ್ | ಸ್ಥಳೀಯರು | |

| | | | | | | | |
|---|---|---|---|---|---|---|---|
| 12 | ಬಿ.ಜಿ. ಜಗದೀಶ್ | ಪುರುಷ | 39 | ಶಿಕ್ಷಕರು | ಎಂ.ಎ, ಬಿ.ಎಡ್ | ಸ್ಥಳೀಯರು | |
| 13 | ಮೈಲಾರಿ | ಪುರುಷ | 38 | ಉದ್ಯಮಿ | ಟಿ.ಸಿಹೆಚ್, ಪಿ.ಯು.ಸಿ | ಸ್ಥಳೀಯರು | |
| 14 | ಸುಮ | ಮಹಿಳೆ | 28 | ಗೃಹಿಣಿ | 8ನೇತರಗತಿ | ಸ್ಥಳೀಯರು | |
| 15 | ಸುಶೀಲಮ್ಮ | ಮಹಿಳೆ | 56 | ಗೃಹಿಣಿ | – | ಸ್ಥಳೀಯರು | |
| 16 | ಮಂಜುನಾಥ | ಪುರುಷ | 41 | ವ್ಯಾಪಾರಸ್ಥರು | ಪಿ.ಯು.ಸಿ | ಸ್ಥಳೀಯರು | |
| 17 | ನಾಗೇಂದ್ರ | ಪುರುಷ | 42 | ಬೇಸಾಯ | ಎಸ್.ಎಸ್.ಎಲ್.ಸಿ | ಸ್ಥಳೀಯರು | |
| 18 | ನಿಶಾಂತ್ | ಪುರುಷ | 26 | ರಾಜಕಾರಿಣಿ | ಬಿ.ಎ | ಸ್ಥಳೀಯರು | |
| 19 | ರಘು | ಪುರುಷ | 28 | ಉದ್ಯೋಗಿ | ಪಿ.ಯು.ಸಿ | ಸ್ಥಳೀಯರು | |
| 20 | ಲೋಕೇಶ್ | ಪುರುಷ | 32 | ವ್ಯಾಪಾರಿ | – | ಸ್ಥಳೀಯರು | |
| 21 | ಶಾಂತಮ್ಮ | ಸ್ತ್ರೀ | 49 | ಗೃಹಿಣಿ | 2ನೇತರಗತಿ | ಸ್ಥಳೀಯರು | |

## ಪರಾಮರ್ಶನ ಗ್ರಂಥಗಳು


1. ಬೆಟ್ಟದಪುರದಲ್ಲಿ ಬಸವಶಿಲ್ಪ: ಸಂ. ಡಾ.ಪಿ.ಕೆ.ರಾಜಶೇಖರ್ ಮತ್ತು ಚಿಕ್ಕಮಳಲಿ ಆರ್.ಮಹದೇವ.
2. ಕರ್ನಾಟಕ ಜಾತ್ರೆಗಳು: ಸಂ ಶ್ರೀ ಶಿವಕುಮಾರ ಸ್ವಾಮಿ.
3. ಪಿರಿಯಾಪಟ್ಟಣ: ಸವಿನೆನಪಿನ ಸಂಚಿಕೆ 2003–04.
4. ಎಪಿಗ್ರಾಫಿಯಾ ಕರ್ನಾಟಕ ಸಂಪುಟ ನಾಲ್ಕು ಕನ್ನಡ ಅಧ್ಯಾಯನ ಸಂಸ್ಥೆ ಮೈಸೂರು ವಿ.ವಿ ಮೈಸೂರು
5. ಪ್ರಜಾವಾಣಿಯಲ್ಲಿನ ತೇಸಿ ವಿಶ್ವೇಶ್ವರಯ್ಯ ಇವರ 'ಸಿಡಿಲ ಮಲ್ಲಿಕಾರ್ಜುನ ಬೆಟ್ಟ ಪ್ರವಾಸಿಗೆರೆಗೊಂದು ಕೌತುಕ ಬರಹ'.

೧. ಬೆಟ್ಟದಪುರ
೨. ಗೊರಹಳ್ಳಿ
೩. ಮಲ್ಲಿಕಾರ್ಜುನಸ್ವಾಮಿ ಬೆಟ್ಟ
೪. ಚಕ್ಕವೀರದೇಶಿಕೇಂದ್ರ ಮಠ
೫. ಬೆಟ್ಟದ ತುಂಗಾ
೬. ಹರದೂರು
೭. ಹಳೆಕೆರೆ
೮. ತಾವರೆಕೆರೆ
೯. ಬಂಡಾರಗಟ್ಟೆ
೧೦. ಮಸೀದಿ
೧೧. ಚರ್ಚು
೧೨. ಶ್ರೀಸಿಡ್ಲು ಮಲ್ಲಿಕಾರ್ಜುನ ಸ್ವಾಮಿ ದೇವಾಲಯ
೧೩. ಪವಾಡ ಬಸವೇಶ್ವರ ದೇವಾಲಯ
೧೪. ಕೋದಂಡರಾಮ ದೇವಾಲಯ
೧೫. ಆಂಜನೇಯ ದೇವಸ್ಥಾನ
೧೬. ಪಾತಾಳ ಲಿಂಗೇಶ್ವರ ಗುಡಿ
೧೭. ಸಂಕ್ರಾತಿ–ಮಾಳ ಮತ್ತು ಗಾಳಿಮಂಟಪ
೧೮. ಮದುವಣಿಗ–ಮದುವಣಗಿತ್ತಿ
೧೯. ಮಂಟಿಯಮ್ಮನ ದೇವಸ್ಥಾನ





ಕೃಷಿ ಉತ್ಪನ್ನ ಮಾರುಕಟ್ಟೆ ಪ್ರಾಂಗಣ ಬೆಟ್ಟದಪುರ

